## ಮುನ್ನುಡಿ

ಸಾಹಸ ಮನುಷ್ಯನ ಮೂಲ ಪ್ರವೃತ್ತಿ. ಸಾಹಸವನ್ನು ತಮ್ಮ ವ್ಯಕ್ತಿತ್ವದ ಒಂದು ಮುಖ್ಯ ಲಕ್ಷಣವನ್ನಾಗಿ ಮಾಡಿಕೊಂಡು ಅದನ್ನು ಆತ್ಮ ಗೌರವ ಹಾಗೂ ರಾಷ್ಟ್ರ ಗೌರವಗಳಿಗೆ ಬಳಸಿಕೊಂಡು ಚಿರಸ್ಮರಣೀಯರಾದ ಮಹಾವೀರರನ್ನು ಕುರಿತು ಕವಿಗಳು ಕಾಲದಿಂದ ಕಾಲಕ್ಕೆ ಕಾವ್ಯ ರೂಪದಲ್ಲಿ ಗೌರವಿಸಿದ್ದಾರೆ. ಹೀಗಾಗಿ ವೀರ ಕಾವ್ಯದ ಉದಯವಾಯಿತು. ಹಾಗೆ ನೋಡಿದರೆ ಜಗತ್ತಿನ ಎಲ್ಲಾ ಮಹಾ ಕಾವ್ಯಗಳು ವೀರ ಕಾವ್ಯಗಳೇ ಆಗಿವೆ. ಈ ವೀರ ಎರಡು ರೀತಿಯಲ್ಲಿ ಪ್ರಕಟವಾಗಬಹುದು : ಒಂದು ತ್ಯಾಗವೀರ, ಮತ್ತೊಂದು ರಣವೀರ. ಒಬ್ಬ ವ್ಯಕ್ತಿಯಲ್ಲಿಯೇ ಈ ಎರಡೂ ಕಾಣಿಸಿಕೊಳ್ಳಬಹುದು. ವೀರವನ್ನು ಬಿಟ್ಟರೆ ಎರಡನೆಯ ಸ್ಥಾನ ಶೃಂಗಾರಕ್ಕೆ. ಶೃಂಗಾರ ಮತ್ತು ವೀರ ಎಷ್ಟೋ ವೇಳೆ ಪರಸ್ಪರ ಪೂರಕ ರಸಗಳಾಗಿ ವ್ಯಾಪಿಸಿಕೊಂಡಿವೆ.

ವೀರಕ್ಕೆ ವಯಸ್ಸಿನ ಮಿತಿಯಿಲ್ಲ. ಅದು ಅಸಾಮಾನ್ಯನಲ್ಲಿ ಹೇಗೋ ಸಾಮಾನ್ಯನಲ್ಲಿಯೂ ಹಾಗೆ, ಭೀಷ್ಮರಂಥ ವಯೋವೃದ್ಧರಲ್ಲಿ ಹೇಗೋ, ಅಭಿಮನ್ಯುವಿನಂತ ಬಭ್ರುವಾಹನರಂತ ಯುವಕರಲ್ಲಿ ಮಾತ್ರವಲ್ಲದೆ, ಎಳೆಯ ಬಾಲಕರಾದ ಲವ ಕುಶರಂತಹವರಲ್ಲಿಯೂ ಪ್ರಕಟವಾಗಬಹುದು. ಅದರಲ್ಲಿಯೂ ಯುವಕರ ಮತ್ತು ಎಳೆಯ ಬಾಲಕರಲ್ಲಿ ಪ್ರಕಟವಾಗುವ ವೀರ ತುಂಬ ಮೋಹಕವೂ, ಪ್ರಶಂಸಾರ್ಹವೂ ಆಗುತ್ತದೆ.

ವೀರಕುಮಾರ ಸಂಗ್ರಾಮ ಎಂಬ ಈ ಕೃತಿಯಲ್ಲಿ ನಾವು ಕಾಣುವುದು ಮುಖ್ಯವಾಗಿ ತರುಣರ ಮತ್ತು ಬಾಲಕರ ವೀರವನ್ನು. ಇಲ್ಲಿ ಕಾಣುವ ಇಬ್ಬರು ತರುಣರು ಮಹಾಭಾರತದ ಮುಖ್ಯ ಪಾತ್ರವಾದ ಅರ್ಜುನನ ತನೂ

ಭವರು. ಅವಳಿ ಮಕ್ಕಳಾದ ಲವ ಕುಶರು ಶ್ರೀರಾಮನ ತನೂಭವರು. ಹೀಗೆ ರಾಮಾಯಣ ಮಹಾಭಾರತಗಳಲ್ಲಿ ಕಾಣುವ ಈ ತರುಣ ಕುಮಾರ ಸಂಗ್ರಾಮದ ಪ್ರಸಂಗಗಳಲ್ಲಿ ಅಭಿಮನ್ಯುವಿನ ಪ್ರಸಂಗವೊಂದು ತಂದೆಯ ಪರವಾಗಿ ಮಗ ಮಾಡಿದ ಯುದ್ಧವಾದರೆ, ಇನ್ನೆರಡು ತಂದೆಯ ವಿರುದ್ಧವಾಗಿ ಮಕ್ಕಳು ಹೋರಾಡಿದ ಪ್ರಸಂಗಗಳಾಗಿವೆ.

ಕುಮಾರವ್ಯಾಸ ಭಾರತದಲ್ಲಿ ಬರುವ ಅಭಿಮನ್ಯುವಿನ ಪ್ರಸಂಗ ಮುಖ್ಯ ಕತೆಯೊಂದಿಗೆ ಸಾವಯವ ಸಂಬಂಧವನ್ನು ಕಾಯ್ದುಕೊಂಡು ಅಲ್ಲಿನ ಪರಿಸರಕ್ಕೆ ಅಂಗವಾಗಿ ಬಂದರೆ, ಬಭ್ರುವಾಹನನ ಪ್ರಸಂಗ ಮಹಾಭಾರತದ ಉತ್ತರ ಭಾಗದಲ್ಲಿ ಬಂದು ಭಾರತದ ಕತೆಯೊಂದಿಗೆ ಅನಿವಾರ್ಯ ಸಂಬಂಧವನ್ನು ಹೊಂದಿದೆ ಎಂದು ಅನ್ನಿಸದಿದ್ದರೂ, ಲೋಕೋತ್ತರ ವೀರನಾದ ಅರ್ಜುನನ ಗರ್ವವನ್ನು ಅವನ ಮಗನೇ ಮುರಿದನೆಂಬ ಕುತೂಹಲಕರವಾದ, ತಾತ್ವಿಕ ಮಹತ್ವವನ್ನುಳ್ಳ ಸಂದರ್ಭವೊಂದನ್ನ ಸೃಷ್ಟಿಸುವುದರಲ್ಲಿ ಯಶಸ್ವಿಯಾಗಿದೆ. ಲವ ಕುಶರ ಪ್ರಸಂಗ ಲಕ್ಷ್ಮೀಶನ ಜೈಮಿನಿ ಭಾರತದ ಒಂದು ಉಪಕತೆಯಾಗಿ ಬಂದರೂ ಅದು ರಾಮಾಯಣದ ಉತ್ತರ ಕಾಂಡದ ಒಂದು ಮೋಹಕವಾದ ಪ್ರಸಂಗವನ್ನು ನಮ್ಮ ಎದುರಿಗೆ ತೆರೆಯುತ್ತದೆ. ಅಭಿಮನ್ಯುವಿನ ಹೋರಾಟಕ್ಕೆ ಕುರುಕ್ಷೇತ್ರದಂತಹ ರಣ ಪ್ರಸಂಗದ ಅನಿವಾರ್ಯತೆ ಇರುವ ಹಾಗೆ, ಬಭ್ರುವಾಹನ ಹಾಗೂ ಲವ ಕುಶರ ಹೋರಾಟಕ್ಕೆ ಅಂತಹ ಅನಿವಾರ್ಯ ಕಾರಣವಿಲ್ಲ. ಅಲ್ಲಿ ಇರುವ ಕಾರಣವೆಂದರೆ ಯುದ್ಧಮಾಡಬೇಕೆನ್ನುವ ಕಾತರ ಮತ್ತು ಅವಶ್ಯಕತೆಗಳಿಗಿಂತ ಯಜ್ಞದ ಕುದುರೆಯನ್ನು ಕಟ್ಟಿ ತಮ್ಮ ಸಾಹಸ, ಗೌರವಗಳನ್ನು ಪ್ರಶ್ನಿಸುವ ಪ್ರವೃತ್ತಿಯನ್ನು ಪ್ರತಿಭಟಿಸುವುದೇ ಆಗಿದೆ. ಅಭಿಮನ್ಯುವಿನ ಹೋರಾಟಕ್ಕಿರುವ ರೌದ್ರತೆ, ಪ್ರತಿಭಟನೆ, ತೀವ್ರತೆ ಮತ್ತು ದುರಂತದಲ್ಲಿ ಪರ್ಯವಸಾನವಾಗುವ ಪರಿಣಾಮ—ಇವುಗಳು ಇನ್ನುಳಿದ ಎರಡು ಪ್ರಸಂಗಗಳಿಗೆ ಇಲ್ಲ; ಇರಬೇಕಾದ ಅವಶ್ಯಕತೆಯೂ ಇಲ್ಲ. ಅಭಿಮನ್ಯುವಿನ ಪ್ರಸಂಗ ತನ್ನ ದುರಂತ ಗಂಭೀರತೆಯಿಂದ ಓದುಗರನ್ನು ತಲ್ಲಣಗೊಳಿಸಿ, ಹೃದಯವನ್ನು ಹಿಂಡುತ್ತದೆ. ಆದರೆ ಬಭ್ರುವಾಹನ ಹಾಗೂ ಲವ ಕುಶ ಪ್ರಸಂಗಗಳು ವೀರಾಟೋಪದಿಂದ, ಮನಸ್ಸನ್ನ ಮೆಚ್ಚಿಸಿ ಸಂತೋಷ ಸಂಭ್ರಮದಲ್ಲಿ ನಿಲುಗಡೆಯಾಗುತ್ತದೆ. ಅಭಿಮನ್ಯುವಿನಪ್ರಸಂಗದಲ್ಲಿ ಮಗನನ್ನು ಕಳೆದುಕೊಂಡ ದುಃಖ ಪ್ರಧಾನವಾದರೆ,

ಬಭ್ರುವಾಹನ ಮತ್ತು ಲವ ಕುಶರ ಪ್ರಸಂಗದಲ್ಲಿ ತಂದೆ ಮಕ್ಕಳ ಮತ್ತು ಅಗಲಿದ ಪತಿ ಪತ್ನಿಯರ ಸಮಾಗಮದ ಅಪೂರ್ವ ಸಂತೋಷ ಪ್ರಧಾನವಾಗಿದೆ.

ಈ ಮೂರು ವೀರ ಪ್ರಸಂಗಗಳಲ್ಲಿಯೂ ಮುಖ್ಯವಾಗಿ ಕಾಣುವುದು ಆತ್ಮಗೌರವದ ಪ್ರಶ್ನೆ. ಸಮಸಪ್ತಕರೊಂದಿಗೆ ಹೋರಾಡಲು ತಂದೆ ತೆರಳಿದಾಗ ಧರ್ಮರಾಯ, ಭೀಮ ಮುಂತಾದ ಅತಿರಥರು, ದ್ರೋಣಾಚಾರ್ಯರು ಒಡ್ಡಿದ ಪದ್ಮವ್ಯೂಹವನ್ನ ಪ್ರವೇಶಿಸಲು ಅಸಮರ್ಥರಾಗಿ ಚಿಂತಾಕ್ರಾಂತರಾಗಿದ್ದಾಗ, ವೀರಕುಮಾರನಾದ ಅಭಿಮನ್ಯುವಿಗೆ ಈ ಪ್ರಸಂಗದಲ್ಲಿ ತನ್ನ ಮನೆತನದ ಮರ್ಯಾದೆಯನ್ನು ಉಳಿಸುವ ಪ್ರಶ್ನೆ ಬಹಳ ಮಹತ್ತದ್ದಾಗಿರುತ್ತದೆ. ಬಭ್ರುವಾಹನನ ಪ್ರಸಂಗದಲ್ಲಾದರೊ ತನ್ನ ತಾಯಿಯನ್ನ ಮರೆತ ತಂದೆಯನ್ನು, ತಾಯಿಯ ಮಾತಿನ ಮೇರೆಗೆ ಗೌರವಿಸಲು ಹೋದ ಬಭ್ರುವಾಹನ, ತಂದೆಯಾದ ಅರ್ಜುನನಿಂದ ತನ್ನ ಮತ್ತು ತನ್ನ ತಾಯಿಯ ಆತ್ಮ ಗೌರವಕ್ಕೆ ದಕ್ಕೆ ತರುವ ಮಾತುಗಳನ್ನು ಕೇಳಿ ಸಿಡಿದೆದ್ದು ಯುದ್ಧಕ್ಕೆ ಸಿದ್ಧನಾಗುತ್ತಾನೆ. ಲವಕುಶರ ಪ್ರಸಂಗದಲ್ಲಿಯೂ ಕೂಡ ರಾಮನ ಯಜ್ಞ ಕುದುರೆಯನ್ನು ತಾನು ಕಟ್ಟದಿದ್ದರೆ ಜನ ತನ್ನ ತಾಯನ್ನು ಬಂಜೆ ಎನ್ನುತ್ತಾರೆಂದು ಭಾವಿಸಿ ಲವ ಕುಶರು ಕುದುರೆಯನ್ನು ಕಟ್ಟುತ್ತಾರೆ. ಹೀಗೆ ಬಭ್ರುವಾಹನ ಮತ್ತು ಲವ ಕುಶರ ಸಂದರ್ಭದಲ್ಲಿ ತಮ್ಮ ಮತ್ತು ತಾಯಂದಿರ ಆತ್ಮಗೌರವ ಈ ಮಕ್ಕಳಿಗೆ ಪ್ರಧಾನವಾಗಿ ಕಾಣುತ್ತದೆ

ಈ ಮೂರು ಪ್ರಸಂಗಗಳಲ್ಲಿ ಕಾಣುವ ಸುಭದ್ರೆ, ಚಿತ್ರಾಂಗದೆ, ಸೀತೆ– ಈ ಮೂವರೂ ಆದರ್ಶಮಾತೆಯರು. ಈ ಮೂವರು ಮಾತೆಯರು ತಮ್ಮ ಮಕ್ಕಳ ಪರಾಕ್ರಮವನ್ನು ಮೆಚ್ಚಿಕೊಂಡರೂ, ಸುಭದ್ರೆಗೆ ಒದಗಿದ ಪುತ್ರ ವಿರಹ ದುರಂತದ ಒಂದು ಭಾಗವಾಗಿದೆ. ಆದರೆ ಚಿತ್ರಾಂಗದೆ ಮತ್ತು ಸೀತೆಯರು ತಮ್ಮ ಮಕ್ಕಳ ಪರಾಕ್ರಮದ ನಿಮಿತ್ತವಾಗಿ ಮತ್ತೆ ತಮ್ಮ ಅಗಲಿದ ಪತಿಯನ್ನ ಕಾಣುವಂತಾಗುತ್ತದೆ. ಈ ಸ್ತ್ರೀಯರು ತಮ್ಮ ಕುಮಾರರು ಆತ್ಮಗೌರವ ಹಾಗೂ ಮನೆತನದ ಗೌರವಕ್ಕಾಗಿ ಪ್ರಕಟಿಸುವ ವೀರವನ್ನು ಒಂದು ಸಾಂಸ್ಕೃತಿಕ ಮೌಲ್ಯವೆಂದು ಒಪ್ಪಿಕೊಳ್ಳುತ್ತಾರೆ.

ತರುಣ ವೀರರು ತಮ್ಮ ತಂದೆಯರ ದೌರ್ಬಲ್ಯ ನಿವಾರಣ ಚಿಕಿತ್ಸಕ

ರಾಗಿ, ಆದರ್ಶ ತಾಯಂದಿರ ಶೀಲರಕ್ಷಣೆಯ ಸಂಕೇತರಾಗಿ, ಸಂಸ್ಕೃತಿಯ ಸಂರಕ್ಷಕರಾಗಿ, ಹೇಗೆ ತಮ್ಮ ಜನ್ಮ ಮತ್ತು ಸಂಸ್ಕೃತಿಯ ಮೌಲ್ಯಗಳ ಬೇರುಗಳು ಕ್ಷಾತ್ರ ತೇಜಸ್ಸಿನ ಮಣ್ಣಿನಲ್ಲಿ ಭದ್ರವಾಗಿ ಬೇರೂರಿರುತ್ತದೆಂಬುದನ್ನು ತೋರಿದ್ದಾರೆ.

ಇಂದಿನ ತರುಣರಿಗೆ ವೀರ ಸಂಪ್ರದಾಯದ ಅರಿವು ಬಂದು ಸಂಸ್ಕೃತಿಯ ಬಗ್ಗೆ ಕಣ್ಣು ತೆರೆದು ಸಂಪ್ರದಾಯ ಮೌಲ್ಯಗಳ ಪ್ರಜ್ಞೆ ಹೃದಯದಲ್ಲಿ ಮಿಡಿದು, ಹಿಂದೆ ಕ್ಷಾತ್ರ ತೇಜಸ್ಸಿನಲ್ಲಿ ಕಣ್ಣಿಕ್ಕಿದ್ದ ಸಂಸ್ಕೃತಿಯೇ ಮತ್ತೆ ಇಂದು ವೈಜ್ಞಾನಿಕ ತೇಜಸ್ಸಿನಲ್ಲಿ ಚಿಗುರಿಟ್ಟು ಹಬ್ಬಿ ಫಲ ಕೊಟ್ಟಾಗ ಮಾತ್ರ ಸಂಸ್ಕೃತಿಯ ಪುನರುದ್ಧಾರ-ಇದೇ ವೀರಕುಮಾರ ಸಂಗ್ರಾಮದ ಸಂದೇಶ.

ಇಂದಿನ ವೈಜ್ಞಾನಿಕ ಯುಗದಲ್ಲಿ ಮಾನವನ ಸಾಹಸ ಅನೇಕ ಮುಖವಾಗಿ ಪ್ರಕಟಗೊಂಡಿದೆ. ಯುದ್ಧ ಮಾಡುವುದೇ ಸಾಹಸ ಎಂಬ ಭಾವನೆ, ಮಾನವನ ಇಂದಿನ ಬೇರೆ ಬೇರೆಯ ಅನೇಕ ಸಾಹಸಗಳ ಎದುರು ತೀರ ಅಲ್ಪವೂ, ಬಾಲಿಶವೂ ಎಂಬಂತೆ ತೋರುವುದಾದರೂ, ಈ ಸಾಹಸವನ್ನು ಜೀವಂತವನ್ನಾಗಿರಿಸಿಕೊಂಡು ಬದುಕಿನ ಅಸತ್ ಶಕ್ತಿಗಳ ವಿರುದ್ಧವಾಗಿ ಹೋರಾಡಲು ಬಳಸಿಕೊಳ್ಳಲು ಬೇಕಾದ ಸ್ಫೂರ್ತಿಯನ್ನು ನಾವು ಹಿಂದಿನ ಮಹಾಕಾವ್ಯಾದಿಗಳಿಂದ ಪಡೆಯಲು ಸಾಧ್ಯವಿದೆ.

ಈ ಗ್ರಂಥವನ್ನು ಹೊರತರಲು ನೆರವು ನೀಡಿದ ಆತ್ಮೀಯರಿಗೂ, ಅಂದವಾಗಿ ಮುದ್ರಿಸಿಕೊಟ್ಟ ಜನರಲ್ ಏಜೆನ್ಸಿ ಮುದ್ರಣಾಲಯದವರಿಗೂ, ಪ್ರಕಾಶನವನ್ನು ಕೈಗೊಂಡ ಪ್ರಣತಿ ಪ್ರಕಾಶನದವರಿಗೂ ನನ್ನ ಕೃತಜ್ಞತೆಗಳು.

ತುಮಕೂರು

ಕೆ. ಜಿ. ನಾಗರಾಜಪ್ಪ

## ಪರಿವಿಡಿ


ಮುನ್ನುಡಿ iii

ರಣಚೌಪಟ :

೧. ಪದ್ಮವ್ಯೂಹರಂಜಿಸಿತು ೧

೨. ನೇಮುವ ಕೊಟ್ಟನಾಹವಕೆ ೭

೩. ಸೋತೆವಾವ್ ನೀ ಗೆಲಿದೆ ೧೪

೪. ಸಿಡಿಲು ಜಂಗಮವಾಯ್ತೊ ೩೦

೫. ಶೋಕವಿಮ್ಮಡಿಸಿತ್ತು ೪೫

೬. ಹರನ ಕೋಪವ ಕೇಣಿಗೊಂಡನು ೫೦

ನಿನ್ನ ತನುಭವನ್ ಈತ ೫೭

ಬಾಣಮಂ ಬಂಜೆಗೈದಪರೆ ೬೫

ಟಿಪ್ಪಣಿಗಳು ೭೩

# ರಣಚೌಪಟ

## ೧. ಪದ್ಮವ್ಯೂಹ ರಂಜಿಸಿತು

ಚಿತ್ತವಿಸು ಧೃತರಾಷ್ಟ್ರ ಕೌರವ
ನಿತ್ತನಿರುಳೋಲಗವ ಮಂಜಿನ
ಮುತ್ತಿಗೆಯ ನಭದಂತೆ ಹೊಗೆದುದು ರಾಯನಾಸ್ಥಾನ
ನೆತ್ತಿಮುಸುಕಿನ ಕೈಯ ಗಲ್ಲದ
ಕುತ್ತದಲೆ ನೆಟ್ಟಾಲಿಗಳ ಚಲ
ಚಿತ್ತರಿದ್ದುದು ಸಕಲನಾಯಕವಾಡಿ ದುಗುಡದಲಿ ೧

ದುಗುಡವೇಕೈ ನಿಮಗೆ ಕರ್ಣಾ
ದಿಗಳು ನೀವಕ್ಕುಡರೆ ಬಲುಗಾ
ಳಿಗದೊಳಗೆ ಕೈಮಾಡಿ ನೊಂದಿರಿ ಕೊಂದಿರರಿಭಟರ
ಹಗೆಯ ಕಟ್ಟಲು ಕೊಟ್ಟ ಭಾಷೆಯ
ಬಿಗುಹು ಬೀತುದು ಗುರುಗಳಲಿ ನಂ
ಬುಗೆ ನಿರರ್ಥಕವಾಯ್ತೆನುತ ಕುರುರಾಯ ಬಿಸುಸುಯ್ದ ೨

ಬಲದೊಳಗೆ ಹೆಸರುಳ್ಳವರು ಮು
ಮ್ಮುರಿತವಾಯಿತ್ತಾನೆಕುದುರೆಗ
ಳಳಿದುದಕೆ ಕಡೆಯಿಲ್ಲ ಪವನಜ ಪಾರ್ಥರುಬ್ಬಟೆಯ
ನಿಲಿಸುವಾಪತ್ತಿಗರು ನಮಗಿ
ಲ್ಲಳಲಿ ಮಾಡುವುದೇನೆನುತ ನೃಪ
ತಿಲಕ ಬೇಸಱಿ ನುಡಿಯೆ ಬಳಿಕಿಂತೆಂದನಾ ದ್ರೋಣ ೩

ನಾಳೆ ಫಲುಗುಣ ತಪ್ಪಿದರೆ ಭೂ
ಪಾಲಕನ ಕಟ್ಟುವೆನು ರಣದಲಿ
ಶೂಲಿಯಡ್ಡೈಸಿದರೆ ಹಿಡಿವೆನು ಚಿಂತೆ ಬೇಡಿದಕೆ
ಕೇಳು ಪದ್ಮವ್ಯೂಹದಲಿ ಹೊ
ಕ್ಕಾಳು ಮರಳಿದಡಸ್ತ್ರವಿದ್ಯಾ
ಭಾಳಲೋಚನನೆಂಬ ಬಿರುದನು ಬಿಟ್ಟೆ ನಾನೆಂದ ೪

ಒಳ್ಳಿತಿದು ಕಡುಭಾಷೆ ನಾಳಿನ
ಗೆಲ್ಲವೇ ಗೆಲವರ್ಜುನನು ಹೊ
ಕ್ಕಲ್ಲಿ ಹೊಗುವೆವು ತುಱುಬಿ ಕಾದುವೆವೆಮ್ಮ ಕಳನೊಳಗೆ
ಅಲ್ಲಿ ನೀನೊಲಿದಂತೆ ಮಾಡಿ
ನ್ನೆಲ್ಲವೇತಕೆಯೆನುತ ಸಾಹಸ
ಮಲ್ಲರೆದ್ದರು ವೀರಸಮುಸಪ್ತಕರು ಗರ್ಜಿಸುತ ೫

ಹರಿದುದೋಲಗವಿತ್ತ ಭುವನದೊ
ಳಿರುಳಡವಿಗಡಿತಕ್ಕೆ ಹರಿದವು
ಕಿರಣ ತೆತ್ತಿದವಭ್ರದಲಿ ತಾರಕೆಯ ತೇರುಗಳು
ಹರಿವ ಮಂಜಿನ ನದಿಯು ಹೂಳ್ದವು
ಸರಸವಾಯಿತು ಗಗನತಳ ತಾ
ವರೆಯಸಖ ನಿಜರಥವ ನೂಕಿದನುದಯಪರ್ವತಕೆ ೬

ಕೆದಱಿದವು ನಿಸ್ಸಾಳ ಬಱಿಸಿಡಿ
ಲದುಭುತ ಧ್ವನಿಯಲಿ ನಿರಂತರ
ವೊದಱಿ ಬಯ್ದವು ಕಹಳೆ ಬಿರುದಾವಳಿಯಲತಿರಥರ
ಕದುಬಿದವು ತಂಬಟದ ದನಿ ದಿಗು
ಸದನವನು ಬಲು ಬೊಬ್ಬೆಯಲಿ ನೆಲ
ನದಿರೆ ನಡೆದುದು ಸೇನೆ ಕಲಶೋದ್ಭವನ ನೇಮದಲಿ ೭

ಉಲಿದು ಸಮಸಪ್ತಕರು ತಮ್ಮಯ
ಕಳನ ಗೆಲಿದರು ಚಾತುರಂಗದ
ದಳದ ತೆರಳಿಕೆ ತೆಕ್ಕೆಮಿಗೆ ಕುರುಸೇನೆ ನಡೆತಂದು
ಕಳನ ವೆಂಠಣಿಸಿದವು ರಾಯನ
ಕೆಲಬಲದ ಸುಯಿಧಾನದಲಿ ರಿಪು
ವಳಯ ಧೂಳೀಪಟನು ಹೊಕ್ಕನು ರಣವನಾ ದ್ರೋಣ ೮

ಎಸೆಳೆಸಳು ಮಿಗೆ ಸರಿಸದಲಿ ಜೋ
ಡಿಸಿದನವನೀಪಾಲರನು ತ
ದ್ವಿಸಜ ಕರ್ಣಿಕೆಯೊಡ್ಡಿನಲಿ ಬಲಿದನು ಸುಯೋಧನನ
ಪಸರಿಸಿತು ಕೌರವಕುಮಾರ
ಪ್ರಸರ ಕೇಸರವಾಯ್ತು ನೃತ್ಯುವಿ
ನೊಸಗೆಗೆತ್ತಿದ ಗುಡಿಗಳೆನೆ ತಳೆತವು ಪತಾಕೆಗಳು ೯

ನಿಲಿಸಿದನು ರಾವುತರನಾ ಹೊಱ
ವಳಯದಲಿ ರಾವುತರು ಮುಱಿದರೆ
ನಿಲುವುದೊಗ್ಗಿನ ದಂತಿಘಟೆ ಗಜಸೇನೆಗಡಹಾಗಿ
ತೊಳಗಿದವು ತೇರುಗಳು ತೇರಿನ
ದಳಕೆ ತಾನೊತ್ತಾಗಿ ರಣದ
ಗ್ಗಳೆಯರಿದ್ದುದು ರಾಯನೊಡಹುಟ್ಟಿದರು ಸಂದಣಿಸಿ ೧೦

ಅರನೆಲೆಯ ಸುಯಿಧಾನ ಬಾಹ್ಲಿಕ
ತರಣಿಸುತ ಗುರುಸೂನು ಕೃತವ
ರ್ಮರಿಗೆ ಕೃಪ ದುಶ್ಯಾಸನಾದ್ಯರಿಗಿದಿರಿನಾರೈಕೆ
ಎರಡು ಕೆಲದಲಿ ಶಲ್ಯ ಶಕುನಿಗ
ಳಿರವು ಸೇನೆಯ ಸುತ್ತುವಳಯದ
ಭರವ ಕೈಕೊಂಡೊಡ್ಡ ಮೆಱೆದನು ಗರುಡಿಯಾಚಾರ್ಯ ೧೧

ಹಿಳುಕ ತಿರುಹುತ ಸಮ್ಮುಖದ ಬಲ
ದಳವಿಯಲಿ ಗಿರಿಯಂತೆ ಸೈಂಧವ
ಬಿಲುದುಡುಕೆ ಮೋಹರಿಸಿದರು ಭೂರಿಶ್ರವಾದಿಗಳು
ದಳದ ಕೆಲಬಲದೊಳಗೆ ನೃಪಸಂ
ಕುಲವ ನಿಲಿಸಿದನಮಮ ಕಾಲನ
ಬಳಗಕೌತಣವೆನಲು ಪದ್ಮವ್ಯೂಹ ರಂಜಿಸಿತು ೧೨

ಮೇಳವದಲೆನ್ನಾನೆಗಳ ಬರ
ಹೇಳು ಸುಭಟರೊಳಗ್ಗಳರ ಬರ
ಹೇಳು ಬಿಂಕಕೆಳಮೆಱೆವ ಭೀಮಾರ್ಜುನರ ಬರಹೇಳು
ಲೋಲುಪತೆಯವನಿಯಲಿಹರೆ ಬರ
ಹೇಳು ಯಮನಂದನನನಿಂದಿನ
ಕಾಳೆಗಕ್ಕೆಂದಿತ್ತ ಭಟ್ಟರನಟ್ಟಿದನು ದ್ರೋಣ ೧೩

ತುರಗ ಹಲ್ಲಣಿಸಿದವು ಸಮರ
ದ್ವಿರದ ಸಜ್ಜಂಬಡೆದವೊಗ್ಗಿನ
ತುರಗದಲಿ ಹೂಡಿದವು ರಥ ಕಾಲಾಳು ಮುಂಕೊಳಿಸಿ
ಅರಸನನುಜರು ಸಹಿತ ಕೃಷ್ಣನ
ಬಿರಳ ಸನ್ನೆಯೊಳೈದೆ ಬಿಡೆ ಮೋ
ಹರಿಸಿ ನಿಂದುದು ಮುರಿದ ಮಕರವ್ಯೂಹರಚನೆಯಲಿ ೧೪

ಬಂದು ಸಮಸಪ್ತಕರ ದೂತರು
ನಿಂದರರ್ಜುನನಿದಿರಲೇಳೈ
ನಂದಗೋಪನ ಮಗನ ಬಿಡು ನೆರವಿಂಗೆ ಕರೆ ಹರನ
ಇಂದು ರಣದಲಿ ಬದುಕಿದರೆ ನೀ
ನೆಂದಿಗೆಯು ಬದುಕಿದನೆ ನಿಂದಿರು
ನಿಂದಿರೆಂದವಗಡಿಸಿ ಹಿಡಿದರು ಫಲುಗುಣನ ಸೆಱಗ ೧೫

ಖರೆಯರಹಿರುಂಟುಂಟು ನೆರವನೆ
ಕರಸಿಕೊಂಡೇ ಬಹೆನೆನುತ ರಿಪು
ಚರರ ಕಳುಹಲು ದ್ರೋಣನಟ್ಟಿದ ದೂತರೈತಂದು
ಕರೆದರರ್ಜುನನನು ವೃಕೋದರ
ಧರಣಿಪತಿ ಮಾದ್ರೇಯ ಹೈಡಿಂ
ಬರಿಗೆ ಸೂಕದು ಪಾರ್ಥ ಪದ್ಮವ್ಯೂಹವಿಂದಿನಲಿ ೧೬

ಶಿವನ ಬೇಡಿದ ಶರವ ತೆಗೆ ಗಾಂ
ಡಿವವ ಬಿಗಿ ನಿನ್ನಿಷ್ಟ ದೈವವ
ತವಕದಲಿ ನೀ ಬೇಡಿಕೊಂಬುದು ಪರಮುಸದ್ಗತಿಯ
ಅವರಿವರ ಹವಣಲ್ಲ ಗುರು ಮುನಿ
ದವಗಡಿಸಿದರೆ ನಿಲುವನಾವನು
ಬವರಕೇಳೇಳೆಂದು ಜಱಿದರು ದೂತರರ್ಜುನನ ೧೭

ಆಳಿಯನೀ ಮೋಹರದೊಳಲ್ಲದೆ
ಫಲುಗುಣನ ಮಗನಿವನು ಬಲುಗೈ
ಯುಳುಹ ಬಾರದು ಕಾಯಿದರೆ ಕಲಿಯುಗಕೆ ಗತಿಯಿಲ್ಲ
ಫಲುಗುಣನ ನಾವಿತ್ತಲೊಯ್ದರೆ
ಬಳಿಕ ನಿರ್ಣಯವೆಂದು ಮನದಲಿ
ತಿಳಿದು ಪಾರ್ಥಂಗೆಂದನಸುರಾರಾತಿ ನಸುನಗುತ ೧೮

ಗುಣಕೆ ಹುರುಡೇ ನಿನ್ನ ಮಗನೀ
ರಣವ ಬಗೆವನೆ ಸೂರ್ಯನಾರೋ
ಗಣೆಗೆ ಸೊಡರೇ ಸಾಕಿದೇತಕೆ ಬಯಲ ಭಂಡತನ
ಕೆಣಕು ನಡೆ ಸಮಸಪ್ತಕರನೀ
ಬಣಗುಗಳ ಕೊಂಬನೆ ಕುಮಾರಕ
ನಣಕವಲ್ಲೆಂದಸುರರಿಪು ತಿರುಹಿದನು ನಿಜರಥವ ೧೯

ಹರಿಸಹಿತ ಕಲಿಪಾರ್ಥನತ್ತಲು
ತಿರುಗಿದನು ಬಳಿಕಿತ್ತಲೀ ಮೋ
ಹರಮಹಾಂಭೋನಿಧಿಗೆ ಮೊಗಸಿತು ಸರ್ವತೋಮುಖರು
ಮೊರೆವ ಪಟಹ ಮೃದಂಗ ಘನ ಜ
ರ್ಜರಿತವಹ ನಿಸ್ಸಾಳಚಯದ
ಬ್ಬರಣೆ ಗಬ್ಬರಿಸಿದುದು ಕಮಲಭವಾಂಡ ಖರ್ಪರವ ೨೦

ಉರವಣಿಸಿದರು ನಕುಲ ಸಾತ್ಯಕಿ
ವರ ವಿರಾಟ ದ್ರುಪದ ಕೈಕೆಯ
ಬಿರುದ ಧೃಷ್ಟದ್ಯುಮ್ನ ಕುಂತೀಭೋಜ ಮೊದಲಾಗಿ
ಧರಣಿಪರು ಥಟ್ಟೈಸಿ ರಿಪುಮೋ
ಹರಕೆ ಕವಿದುದು ಕಾದಿ ದುರ್ಗವ
ಮುಱಿಯಲಱಿಯದೆ ಮುರಿವುತಿದ್ದುದು ಬಸಿವ ರಕ್ತದಲಿ ೨೧

ಸುಳಿದು ಹರಿ ಮೇಖಳೆಯ ಮೋಹರ
ದೊಳಗೆ ಮುಗ್ಗಿದಿರೈ ಮಹಾಮಂ
ಡಳಿಕರಿರ ಘಡ ಹೋಗಿರೈ ನೀವೆನುತ ಖಾತಿಯಲಿ
ಬಿಲುದುಡುಕಿ ಪವಮಾನನಂದನ
ನಳವಿಗೊಟ್ಟನು ಹೂಣೆ ಹೊಕ್ಕರಿ
ಬಲವನಿಱಿದನು ಘಾಯವಡೆದನು ಘೋರಸಮರದಲಿ ೨೨

ಕಾದಲೆನ್ನಳವಲ್ಲ ಬಲ ದು
ರ್ಭೇದವಿದು ಶಿವಶಿವಯೆನುತ್ತ ನೃ
ಕೋವರನು ಮರಳಿದನು ದುಗುಡಕೆ ತೆತ್ತು ನಿಜಮುಖವ
ಕೈದೆಗೆಯೆ ರಿಪುಬಲದ ಸುಭಟರು
ಕಾದಿದನು ಕಲಿಭೀಮ ಗೆಲಿದನು
ಪೋದನೆಂದರು ಕೂಡೆ ಕೈಗಳ ಹೊಯ್ದು ತಮತಮಗೆ ೨೩

## ೨. ಸೇಮುವ ಕೊಟ್ಟಸಾಹವಕೆ

ಆ ಮಹಾಮೋಹರವನೊಡೆಯಲು
ಸೋಮಕುಲಜರು ಭೀತರಾದರು
ಹಾ ಮಹಾದೇವೆನುತ ಧರ್ಮಜ ನೋಡಿ ತಲೆದೂಗಿ
ರಾಮನಜೀವನು ಕೃಷ್ಣನಜೀವನು
ಸೀಮೆಯಲಿ ಕಲಿಪಾರ್ಥನಜೀವನು
ಭೂಮಿಪತಿಗಳೊಳುಳಿದ ಸುಭಟರಿಗಜೀವುದಿಲ್ಲೆಂದ ೧

ಹೊಗಲು ಬಲ್ಲನು ಹೊಕ್ಕವೊಲು ಹೆಱ
ದೆಗೆಯಲಱಯನು ವೀರ ಪಾರ್ಥನ
ಮಗನು ಮತ್ತಯ್ದನೆಯ ಸುಭಟರ ಕಾಣೆ ನಾನೆನುತ
ಅಗಿವ ಚಿಂತೆಯೊಳರಸ ಕದನದ
ದುಗುಡ ಭಾರದಲಿರಲು ಮುಂಗೈ
ನಿಗಳವನು ತಿರುಹುತ್ತ ನಸು ನಗುತೆದ್ದನಭಿಮನ್ಯು ೨

ಜನಪನಂಘ್ರಿಗೆ ಮಣಿದು ಕೈಮುಗಿ
ದೆನಗೆ ಬೆಸಸೈ ಬೊಪ್ಪ ತಾ ಬ
ಲ್ಲೆನು ಮಹಾಹವದೊಳಗೆ ಪದ್ಮವ್ಯೂಹಭೇದನವ
ಅನುವರವ ಗೆಲುವೆನು ಕೃತಾಂತನ
ಮನೆಗೆ ಕಳುಹುವೆನಹಿತರನು ನೀ
ನಿನಿತು ಚಿಂತಿಸಲೇಕೆ ಕಾಳೆಗಕೆನ್ನ ಕಳುಹೆಂದ ೩

ಹಸುಳೆಯುದಟನ ನುಡಿಯು ಕೇಳಿದು
ನಸು ನಗುತ ಧರ್ಮಜನು ಘನ ಪೌ
ರುಷವು ನಿನಗುಂಟೆಂದು ಕಂದನ ತೆಗೆದು ಬಿಗಿಯಪ್ಪಿ
ಶಿಶುವು ನೀನೆಲೆ ಮಗನೆ ಕಾದುವ
ರಸಮ ಬಲರು ಕರ್ಣಾ ಮಹಾರಥ
ರೆಸುಗೆಯನು ನೀನೆಂತು ಸೈರಿಸಲಾಪೆ ಹೇಳೆಂದ ೪

ಸುಳಿಯಬಹುದಂಬುಧಿಯ ನಡುವಣ
ಸುಳಿಯೊಳಗೆ ಸಂವರ್ತಕನ ಕೊರ
ಳೊಳಗೆ ಕುಣಿಯಲುಬಹುದು ಮೃತ್ಯುವಿನಣಲ ಹೊಳಲೊಳಗೆ
ಹೊಕ್ಕಬಹುದಹಿಪನ ಫಣಾಮಂ
ಡಳದೊಳಾಡಲುಬಹುದು ಕಾಣೆನು
ಗೆಲುವ ಹದನನು ಮಗನೆ ಪದ್ಮವ್ಯೂಹದೊಡ್ಡಣೆಯ ೫

ಬಿಡು ಮರೀಚಿಯ ತೊಱಿಗೆ ಹಱಿಗೋ
ಲಿಡುವರುಂಟೇ ಲಿಪ್ಪದುರಗನ
ಹಿಡಿವಡೇತಕೆ ಗರುಡಮಂತ್ರವು ಚಪಲನೆನ್ನದಿರು
ಕೊಡನಮಗನ ಕುಮಂತ್ರದೊಡ್ಡಿನ
ಕಡಿತಕಾನಂಜುವೆನೆ ವೆಗ್ಗಳ
ನುಡಿಯಲಮ್ಮೆನು ತನ್ನನೀಗಳೆ ಬಿಟ್ಟು ನೋಡೆಂದ ೬

ಅವರೊಳಗಲಕೆ ನಿಂದ ರಿಪುಗಳ
ಜವನ ಬೋನವ ಮಾಡದಿದ್ದರೆ
ಅವನಿಯನು ಗೆಲದೇ ಮಹಾರಥರೆನಿಪ ನಾಯಕರ
ಅವನಿಯೊಳಗೊಱಗಿಸದೆ ಮಾಱಾಂ
ತವರ ನುಂಗದೆ ಮಾಣ್ಡೆನಾದರೆ
ದಿವಿಜಪತಿತನಯಂಗೆ ತಾ ಜನಿಸಿದವನಲ್ಲೆಂದ ೭

ಕಂದ ವೈರಿವ್ಯೂಹವಸದಳ
ವೆಂದೆನಿಪುದದಱೊಳಗೆ ಕೃಪ ಗುರು
ನಂದನರು ರಾಧೇಯ ಭೂರಿಶ್ರವ ಜಯದ್ರಥರು
ಇಂದುಧರನಡಹಾಯ್ದರೊವ್ಮಿಗೆ
ಹಿಂದುಮುಂದೆನಿಸುವರು ನೀ ಗೆಲು
ವಂದವೆಂತೈ ಸಮರವಿದು ಸಾಮಾನ್ಯವಲ್ಲೆಂದ ೮

ಗಾಳಿ ಬೆಮರುವುದುಂಟೆ ವಹ್ನಿ
ಜ್ವಾಲೆ ಹಿಮಕಂಜುವುದೆ ಮಂಜಿನ
ಮೇಲುಗಾಳಿಗವುಂಟೆ ಬಲುಬೇಸಗೆಯ ಬಿಸಿಲೊಳಗೆ
ಬಾಲನಿವನೆನ್ನದಿರು ದುಗುಡವ
ತಾಳಲಾಗದು ಬೊಪ್ಪ ನಿಮ್ಮಡಿ
ಯಾಲಿಗಳಿಗೌತಣವನಿಕ್ಕುವೆನೊರಸಿ ರಿಪುಬಲವ ೯

ಅಹುದು ಮಗನೆ ಸಮಗ್ರಬಲ ನೀ
ನಹೆ ನಿಧಾನಿಸಲಿಂದು ಪವನಜ
ನಹವ ಮುಱಿದರು ಕಾಯ್ದುಬಿಟ್ಟರು ನಕುಲ ಸಾತ್ಯಕಿಯ
ಸಹಸ ದ್ರುಪದ ವಿರಾಟರುಗಳು
ಮ್ಮಹವ ಸೆಳೆದರು ವಿಜಯಗರ್ವದ
ಲಿಹ ಬಲವ ನೀನೊಬ್ಬನೇ ಸಾಧಿಸುವುದರಿದೆಂದ ೧೦

ಧರಣಿಪತಿ ಕೇಳುಳಿದ ಪುಷ್ಪದ
ಪರಿಮಳವು ಪಥಿಸಿದರೆ ಸಂಪಗೆ
ಯರಳ ಪರಿಮಳ ಪಥ್ಯವೇ ತುಂಬಿಗಳ ತಿಂತಿಣಿಗೆ
ಅರಿಭಟರು ಭೀಷ್ಮಾದಿಗಳ ಗೆಲಿ
ದಿರಲಿ ಹೊಲ್ಲಹವೇನು ಘನಸಂ
ಗರದೊಳಗೆ ನನ್ನೊಡನೆ ತುಡುಕಿದಡಱಿಯಬಹುದೆಂದ ೧೧

ಕೈದುಕಾಱರ ಬಿಗುಹು ಘನ ನೀ
ಹೊಯ್ದು ಮೊದಲಲಿ ಬಿಡಿಸು ಬಳಿಕಾ
ವೈದಿ ನಿನ್ನನು ಕೂಡಿಕೊಂಬೆವು ಹೊಕ್ಕು ಬಳಿಸಲಿಸಿ
ಎಯ್ದಿ ಹಗೆಯಲಿ ಹೂಣಿ ಹೊಗದಿರು
ಮೈದೆಗೆದು ಕಾದುವುದು ಜಯಸಿರಿ
ಯೈದೆತನ ನಿನ್ನಿಂದ ಮೆಱೆವುದು ಕಂದ ಕೇಳೆಂದ ೧೨

ಕೆತ್ತುಕೊಂಡಿರೆ ಬಿಡಿಸುವೆನು ರಥ
ವೆತ್ತಲುಱುಬಿದರತ್ತ ಕಣನೊಳು
ಮತ್ತಗಜ ಮುರಿದಂತೆ ಕದಡುವೆನಹಿತಮೋಹರವ
ಪೊತ್ತಿ ಹೊಗೆವ ಪರಾಕ್ರಮಾಗ್ನಿಯು
ತುತ್ತು ಪದ್ಮವ್ಯೂಹ ದೇವರು
ಚಿತ್ತಯಿಸುವುದು ಪೊತ್ತುಗಳೆಯದೆ ಎನ್ನ ಕಳುಹೆಂದ ೧೩

ಶರನಿಧಿಯ ವಡಬಾನಳನ ದ
ಳ್ಳುರಿಯು ಮರ್ಮವ ತಿವಿವ ತುಂಬಿಗೆ
ಮರಳುದಲೆಯುಂಟಾದಡದು ಭವಭವದ ಪುಣ್ಯಫಲ
ಅರಿಬಲವ ನೀ ಖಂಡಿಗಳೆ ಮೋ
ಹರಸಹಿತ ನಾ ಬಹೆನು ನಡೆಯೆಂ
ದರಸನಭಿಮನ್ಯುವಿಗೆ ನೇಮವ ಕೊಟ್ಟನಾಹವಕೆ ೧೪

ಶಿವಶಿವಾ ಶಿಶುವಿವನು ರಿಪುಗಳು
ಜವನ ಜೂಜೆನಿಸುವ ಮಹಾರಥ
ನಿವಹಕೊಬ್ಬನೆ ಗಡ ಸಮಾಹಿತವಲ್ಲ ಸಮರಂಗ
ಅವನಿಪತಿ ನಿರ್ದಯನಲಾ ಕಂ
ಡೆವು ಕುಮಾರನನಿಕ್ಕಿ ಬಹ ರಾ
ಜ್ಯವನು ಸುಡು ಸುಡಲೇತಕೆಂದುದು ನಿಖಿಳ ಪರಿವಾರ ೧೫

ಲಲಿತಚಂದ್ರಿಕೆಗೇಕೆ ದಾವಾ
ನಳನ ಖಾಡಾಖಾಡಿ ಸುರಲತೆ
ಯೆಳೆಯ ಕುಡಿ ಮುಱಿದೊತ್ತಲಾಪುದೆ ವಜ್ರಧಾರೆಗಳ
ನಳಿನನಾಳವು ಗಜದ ಕೈಯೊಡ
ನಳವಿಗೊಡಲಂತರವೆ ಪಾಪಿಗ
ಳೆಳಮಗನ ನೂಕಿದರು ಕಾಳೆಗಕೆಂದುದಮರಗಣ ೧೬

ಬಿಗಿದ ಗಂಡುಡಿಗೆಯಲಿ ಹೊನ್ನಾ
ಯುಗದ ಹೊಳೆವ ಕಠಾರಿಯಸು ಮೊನೆ
ಮುಗುಚಿ ಸಾಧು ಜವಾಜಿ ಕಸ್ತುರಿಗಂಧಲೇಪದಲಿ
ಮುಗಮುಗಿಪ ಹೊಂದೊಡರ ಹಾರಾ
ದಿಗಳಲೊಪ್ಪಂಬಡೆದು ನಸು ನಗೆ
ಮೊಗದ ಸೊಂಪಿನಲಾಹವಕ್ಕನುವಾದನಭಿಮನ್ಯು ೧೭

ತುರಗತತಿಗಭಿನಮಿಸಿ ರಥವನು
ತಿರುಗಿ ಬಲವಂದೆಱಗಿ ಚಾಪಕೆ
ಕರವ ನೊಸಲಲಿ ಚಾಚಿ ಭಾರಿಯ ಭುಜವನೊದಱಿಸುತ
ಅರಸಗಭಿವಂದಿಸುತ ಭೀಮನ
ಹರಕೆಗಳ ಕೈಕೊಳುತ ನಕುಳಾ
ದ್ಯರಿಗೆ ಪೊಡವಟ್ಟಡರಿದನು ನವ ರತುನಮಯ ರಥವ ೧೮

ಒಡನೆ ಕಳುಹುತ ಬಂದನಾ ನೆಲ
ದೊಡೆಯನನುಜರುಸಹಿತ ನಯನದಿ
ಬಿಡುವನಿಯ ಸಾಲಿನಲಿ ನನೆದರು ಬಂದು ಕಿಱುದೆಡೆಯ
ನಡೆ ವಿಜಯನಾಗೆಂದು ತನುವನು
ತಡವಿದರು ಕಡುಮೋಹವೆಡೆಯಲಿ
ಘುಡುಘುಡಿಸೆ ಶಿಶು ಬೀಳುಕೊಂಡನು ಪಿತೃಚತುಷ್ಟಯವ ೧೯

ಎಲೆ ಕುಮಾರಕ ಹರಕುಮಾರಂ
ಗಳವಿಯಲಿ ನಿಲಲರಿದು ಕೊರಳಿನ
ಬಲುಹನಱಿಯದೆ ಗಿರಿಯ ಹೊಱಲಂಘೈಸುವರೆ ಭಟರು
ಬಲುಗಡಿಯನೀ ಕರ್ಣನೀ ಕೃಪ
ನಲಘುಭುಜಬಲ ದ್ರೋಣನೀ ವೆ
ಗ್ಗಳಿಯು ಜಯದ್ರಥನೆಂದು ಸಾರಥಿ ತೂಗಿದನು ಶಿರವ ೨೦

ಮರುಳುಸಾರಥಿ ನಮ್ಮ ನಾವ್‌ಪತಿ
ಕರಿಸಿಕೊಳಲಾಗದು ಕಣಾ ನೀ
ನಱಿಯೆ ನಮ್ಮಂತರವ ನಾವಿನ್ನಾಡಿ ಫಲವೇನು
ಗುರುತನುಜನೇ ಕೃಪನೆ ದ್ರೋಣನೆ
ತರಣಿತನಯನೆ ಸೈಂಧವನೆ ಹುಲು
ನರರು ಗಣ್ಯವೆ ಕೇಳು ಭಾಷೆಯನೆಂದನಭಿಮನ್ಯು ೨೧

ಬವರವಾದರೆ ಹರನ ವದನಕೆ
ಬೆವರ ತಹೆನವಗಡಿಸಿದರೆ ವಾ
ಸವನ ಸದೆವೆನು ಹೊಕ್ಕಡಹುದೆನಿಸುವೆನು ಭಾರ್ಗವನ
ಜವನ ಜವಗೆಡಿಸುವೆನು ಸಾಕಿ
ನ್ನಿವರವರಲೇನರ್ಜುನನು ಮಾ
ಧವನು ಮುನಿದಡೆ ಗೆಲುವೆನಂಜದೆ ರಥವ ಹರಿಸೆಂದ ೨೨

ಆರ ರಥವಿದು ಸೈನ್ಯಪಾರಾ
ವಾರಕಿದನಂಘೈಸುವನು ತ್ರಿಪು
ರಾರಿಯೋ ಮೇಣಾ ತ್ರಿವಿಕ್ರಮನೋ ಸುರೇಶ್ವರನೊ
ವೀರನಹನೋ ಪೂತು ರಣದ ತೊ
ಠಾರನಿವನಾರೆನುತ ತಱುಬಿಯೆ
ತೋರಹತ್ತರು ತಾಗಿದರು ಸೌಬಲ ಜಯದ್ರಥರು ೨೩

ರಥ ಮುಱಿದು ಮನನೊಂದು ಸುಮಹಾ
ರಥರು ಹಿಮ್ಮೆಟ್ಟಿದರು ಬಳಿಕತಿ
ರಥಭಯಂಕರನೊಡೆದು ಹೊಕ್ಕನು ವೈರಿವ್ಯೋಹರವ
ಮಥನದಲಿ ಮುಱಿಯೊಡೆದ ಶೈಲ
ವ್ಯಥಿತ ಸಾಗರದಂತೆ ಬಿರಿದವು
ರಥನಿಕರ ಕಾಲಾಳು ಕುದುರೆಗಳೊಂದು ನಿಮಿಷದಲಿ ೨೪

## ೩. ಸೋಕೆವಾವ್ ನೀ ಗೆಲಿದೆ

ಅವಧರಿಸು ಧೃತರಾಷ್ಟ್ರನೃಪ ಸೈಂ
ಧವನ ಗೆಲಿದಾ ವ್ಯೂಹಭೇದಾ
ಹವವಿಜಯ ವಿಜಯಾತ್ಮಕನ ಕೌತುಕ ರಣೋದಯವ
ತ್ರಿವಿದನುಱುಬುವ ರಥ ಪದಾತಿಯ
ಕವಿವ ಗರುವ ತುರಂಗಗಳ ಬಲು
ಜವದ ರಥ ಕೋಟ್ಯಾನುಕೋಟಿಯ ಹೊದಱು ಹೊಸ ಮೆಳೆಯ ೧

ಕದಳಿಯೊಳು ಮದದಾನೆ ಹೊಕ್ಕಂ
ದದಲಿ ಹೆಚ್ಚಿದ ಚಾತುರಂಗದ
ಮೆದೆಯನೊಟ್ಟಿದು ಹೂಣೆ ಹೊಕ್ಕನು ಥಟ್ಟನೊಡೆತುಳಿದು
ಇದಿರೊಳೆಚ್ಚನು ಕೆಲಬಲದೊಳಿಹ
ಕದನಗಲಿಗಳ ಸೀಳಿದನು ಕಾ
ದಿದನು ಕಾಲನ ಲೀಲೆಯಾದುದು ವಿಷಮಸಮರಂಗ ೨

ತೊಲಗಿರೈ ಕಾಲಾಳು ಮೇಲಾ
ಳಳವಿಗೊಡಲಿ ಮಹಾರಥರು ಮುಂ
ಕೊಳಲಿ ಜೋದರು ದಿಟ್ಟರಾದರೆ ಕವಿಸಿ ಕರಿಘಟೆಯು
ಕೆಲದ ದೊರೆಗಳು ಬರಲಿ ಮಾಱಾಂದ
ತಲೆಯು ಭಂಡವ ಹೊತ್ತಿರದೆ ಕೈ
ಕೊಳಲಿ ಕರ್ಣಾದಿಗಳೆನುತ ಹೊಕ್ಕೈಚ್ಚನಭಿಮನ್ಯು ೩

## ಸೋತೆವಾವ್ ನೀ ಗೆಲಿದೆ

ಕರಿಘಟೆಯ ಕಲಕಿದನು ಹಯವೋ
ಹರವ ಜರುಹಿದನೌಕಿ ಹರಿತಹ
ವರರಥವ ಹುಡಿಮಾಡಿದನು ಕೆಡಹಿದನು ಕಾಲಾಳ
ಹುರಿಯೊಡೆದು ವ್ಯೈದೆಗೆದು ಸಲೆ ಕೈ
ಮಱಿದು ಕೈದುವ ಹಾಯ್ಕಿ ಪಡೆ ವೊಗ
ದಿರುಹಲೆಚ್ಚನು ಕೊಚ್ಚಿದನು ಕೌರವಚತುರ್ಬಲವ ೪

ಜರಿದುದಬ್ಜವ್ಯೂಹ ನೂಕಿದ
ಕರಿ ತುರಗ ಕಾಲಾಳು ತೇರಿನ
ಮರಳುದಲೆ ತಾನಿಲ್ಲ ನೆಱಿ ನುಗ್ಗಾಯ್ತು ಕುರುಸೇನೆ
ದೊರೆಗಳಹ ದ್ರೋಣಾದಿಗಳು ಕೈ
ಮಱಿದು ಕಳೆದರು ಪಾರ್ಥತನಯನ
ಸರಿಯೊರೆಗೆ ಭಟನಾವನೆಂದನು ಕೌರವ ರಾಯ ೫

ತಂದೆ ಹಡೆಯನೆ ಮಗನನಹುದೋ
ಕಂದ ಕಲ್ಪಸಹಸ್ರ ನೋಂತಳೊ
ಇಂದುಧರನನು ನಿನ್ನ ತಾಯಿ ಸುಭದ್ರೆಯಲ್ಲದಡೆ
ಇಂದಿನೀ ಬಲವೀ ಸಮರಜಯ
ದಂದವೀ ಸೌರಂಭವೀ ಸರ
ಳಂದವೀ ತೆರಳಿಕೆಯದಾವಂಗೆಂದನವನೀಶ ೬

ಹುರುಡ ಮಱಿದೆನು ಮಗನೆ ಸಾಲದೆ
ಭರತಕುಲದಲಿ ನಿನ್ನ ಬೆಳವಿಗೆ
ಯೆರಡುಕವಲನ್ವಯಕೆ ಕೊಡದೇ ಸುಗತಿಸಂಪದವ
ಕರುಳು ಬೀಳವೆ ತನ್ನ ಬಸುಱಿಂ
ದುರುಳಿದವದಿರಲೇನುಫಲ ಮ
ತ್ಸರವೆ ಪಾರ್ಥ ಕೃತಾರ್ಥನೆಂದನು ಕೌರವರ ರಾಯ ೭

ಎನುತ ಬಿಲುದುಡುಕಿದನು ಸೇನಾ
ವನಧಿಗಭಯವನಿತ್ತು ಮರಳುವ
ಜನಪರನು ಜಱಿದೆಡಬಲದ ಮನ್ನೆಯರ ಮೊದಲಿಸಿ
ಮೊನೆಗಣೆಯ ತೂಗುತ್ತ ನರನಂ
ದನನ ರಥವನು ತಱುಬಿ ನಿನ್ನಯ
ತನಯನಡ್ಡೈಸಿದನು ಕೌರವರಾಯ ಖಾತಿಯಲಿ ೮

ಮಗುವು ನೀ ಕೆಡಬೇಡ ಹೋಗೆನು
ತಗಣಿತಾಸ್ತ್ರವ ಸುರಿವುತೈತರೆ
ನಗುತ ನಿಂದಭಿಮನ್ಯು ನುಡಿದನು ಕೌರವೇಶ್ವರನ
ಮಗುವು ತಾನಹೆ ತನ್ನ ಬಾಣಕೆ
ಮಗುವುತನ ಬೇಱಿಲ್ಲ ನೋಡೆಂ
ದಗಲದಲಿ ಕೂರಂಬ ಸುರಿದನು ಪಾರ್ಥನಂದನನು ೯

ಎಸಲು ಕಣೆ ಮುಕ್ಕುಱುಕಿದವು ಹೊಸ
ಮಸೆಯ ಧಾರೆಯ ತೋರ ಕಿಡಿಯಲಿ
ಮುಸುಕಿತರಸನ ತೇರು ತಳಿತವು ಮೆಯ್ಯೊಳಂಬುಗಳು
ಬಸಿವ ರಕುತದ ಜರಿವ ಜೋಡಿನ
ನಸಿದ ಗರ್ವದ ನೆಗ್ಗಿದಾಳ್ತನ
ದೆಸಕದೊಣಗಿಲ ಬಾಯ ಭೂಪನ ಕಂಡನಾ ದ್ರೋಣ ೧೦

ರಾಯ ಸಿಲುಕಿದನಕಟಕಟ ರಾ
ಧೇಯ ನಡೆ ಕೃಪ ಹೋಗು ಮಗನೆ ನಿ
ಜಾಯುಧವ ಹಿಡಿ ಶಲ್ಯ ತಡೆಯದಿರೇಳು ಕೃತವರ್ಮ
ರಾಯನನುಜರು ಕೈದುಗೊಳಿ ರಣ
ದಾಯ ತಪ್ಪಿತು ನೃಪತಿ ಮಾರಿಯ
ಬಾಯ ತುತ್ತಾದನು ಶಿವಾ ಎಂದೊಱಲಿದನು ದ್ರೋಣ ೧೧

ಮಾತು ಹಿಂಚಿತು ಮುಂಚಿ ಸುಭಟ
ವ್ರಾತ ಹೊಕ್ಕುದು ಸಿಕ್ಕಿದರಸನ
ಭೀತಿಯನು ಬಿಡಿಸಿದರು ಬೀಱಿದರಂಬುಗಳ ಮಳೆಯ
ಸೋತೆವಾವ್ ನೀ ಗೆಲಿದೆ ಕರೆ ನಿ
ಮ್ಮಾತಗಳನೀ ಭ್ರೂಣಹತ್ಯಾ
ಪಾತಕಕ್ಕಂಜುವೆನೆನುತ ಕೈಕೊಂಡನಾ ದ್ರೋಣ ೧೨

ಹಸುಳೆತನದಲಿ ಹರನ ಮಗನಾ
ವಿಷಮದೈತ್ಯನ ಸೀಳಿ ಬಿಸುಡನೆ
ಶಿಶುವಲಾ ಪ್ರದ್ಯುಮ್ನ ಮುಱಿಯನೆ ಶಂಬರಾಸುರನ
ಶಿಶುವೆ ನೋಡಭಿಮನ್ಯು ಸುಭಟ
ಪ್ರಸರದಿನಿಬರನೊಂದು ಘಾಯದೊ
ಳುಸಿರ ತೆಗೆಬಗೆ ಮಾಡಿದನು ಧೃತರಾಷ್ಟ್ರ ಕೇಳೆಂದ ೧೩

ಗುರುಸುತನನೊಟ್ಟೈಸಿ ಶಲ್ಯನ
ಭರವಸವ ನಿಲಿಸಿದನು ಕೃಪನು
ಬ್ಬರದ ಗರ್ವವ ಮುಱಿದು ಕೃತವರ್ಮಕನ ನೋಯಿಸಿದ
ಅರಸನನುಜರ ಸದೆದು ಬಾಹ್ಲಿಕ
ದುರುಳ ಸೌಬಲ ಸೋಮದತ್ತರ
ಹುರುಳು ಗೆಡಿಸಿದನೊಬ್ಬ ಶಿಶು ಗೆಲಿದನು ಮಹಾರಥರ ೧೪

ಮುಳುಗಿದಂಬಿನ ಮಱುಮೊನೆಯ ಮೈ
ಗಳ ಮಹಾರಥರಾಜಿ ಕದನದ
ನೆಲನ ಜಡೆ ಖತಿಗೊಂಡು ಮುಱಿದೋಡುವರ ಮೂದಲಿಸಿ
ಬಿಲುದುಡುಕಿ ಸಾರಥಿಗೆ ಸೂಚಿಸಿ
ಮಲೆತ ನೋಡೈ ಮಗುವು ಫಡ ಫಡ
ತೊಲಗು ತೊಲಗೆಂದೆನುತ ರಿಪುವನು ತಱುಬಿದನು ಕರ್ಣ ೧೫

ಗಾಱುಗೆಡೆದರೆ ಮೆಱೆಯುದೋಲೆಯ
ಕಾಱತನವೆಮ್ಮೊಡನೆ ನೀ ಪೈ
ದೋಱು ಪಡಮುಱಿವಿಲ್ಲದೆಚ್ಚಾಡಿದರೆ ಸಫಲವಿದು
ತೋಱುವೆನು ಕೈಗುಣವನೆನುತ್ತೈ
ದಾಱು ಶರದಲಿ ಕರ್ಣನೆದೆಯನು
ಡೋಱುಗಳೆಯಲು ಬಳಲಿದನು ಪೂರಾಯ ಘಾಯದಲಿ ೧೬

ಬೆದಱಿ ಭೂಕಂಪದಲಿ ಕುಲಗಿರಿ
ಯದಿರುವಂತಿರೆ ಚರಿಸಿ ಕಾಯವ
ಬಿದಿರಿ ಮುರಳುವ ಕಂಗಳಲಿ ಕಲಿಕರ್ಣ ಪೈಮಱೆಯೆ
ಕೆದಱಿತೀ ಬಲವಕಟ ಕರ್ಣನ
ಸದೆದನೋ ಸಾಹಸಿಕ ಶಿಶು ಕಾ
ದಿದೆವು ನಾವಿನ್ನೆನುತಲಿರೆ ಕಲಿಶಲ್ಯನಿದಿರಾದ ೧೭

ಬಾಲಕನೆ ಹಿಮ್ಮೆಟ್ಟು ಹಿಮ್ಮೆ
ಟ್ಟಾಳುತನವೆಮ್ಮೊಡನೆಯೇ ಮರು
ಳೇಳಿಗೆಯಲುಬ್ಬಿದ್ದು ಕರ್ಣನ ಸದೆದ ಗರ್ವದಲಿ
ಮೇಲನಱಿಯಾ ಶಲ್ಯನೊಡನೆಯು
ಕಾಳಗವೆ ನಿಮ್ಮಯ್ಯನಿಂದಿನ
ಲೂಳಿಗವ ತಹುದೆನುತ ಸುರಿದನು ಸರಳ ಸರಿವಳೆಯ ೧೮

ಬಾಲತನವೇನೂಣಯವೆ ಕ
ಟ್ಟಾಳುತನವಾಭರಣವವನೀ
ಪಾಲಸುತರಿಗೆ ವಿದ್ಯವೇ ವಿಪ್ರರಿಗಲಂಕಾರ
ಆಳಿನಂಗವನೆತ್ತ ಬಲ್ಲೆ ಶ
ರಾಳಿಯಲಿ ನಿನ್ನಂಘವಣೆಯ ಥ
ಡಾಳತನವನು ಮುದ್ರಿಸುವೆನೆನುತೆಚ್ಚನಭಿಮನ್ಯು ೧೯

ಸರಳ ಸರಳಲಿ ಕಡಿದು ಸವೆಯದೆ
ಸರಿ ಮಿಗಿಲ ಕಾದಿವರೆ ಶಲ್ಯನ
ಧರಧುರವ ದೆಖ್ಖಾಳತನವನು ಕಂಡು ಖಾತಿಯಲಿ
ಸರಳು ಹದಿನೈದಱಲಿ ಶಲ್ಯನ
ಬರಿಯ ಕೆತ್ತಿದನೈದು ಬಾಣದೊ
ಉರವ ತೋಡಿದನೊಂದುನಿಮಿಷಕೆ ಶಲ್ಯ ಸೈಗೆಡೆದ ೨೦

ತಲೆ ತಿರುಗಿ ತುಟಿಯೊಣಗಿ ಕಂಗಳ
ಬಳೆ ಮರಳಿ ಬಸವಳಿಯೆ ಸಾರಥಿ
ತೊಲಗಿಸಿದನಾ ರಥವನೊಡಹುಟ್ಟಿದನ ವೇದನೆಯ
ನಿಲುಕಿ ಕಂಡನು ಶಲ್ಯನನುಜನು
ಹಿಳುಕು ಹಿಳುಕಿನ ಮೇಲೆ ಸಂಧಿಸಿ
ಮುಳಿದೆಸುತ ತಾಗಿದನು ಖತಿಯಲಿ ಪಾರ್ಥನಂದನನ ೨೧

ಪೂತು ಶಲ್ಯನ ತಮ್ಮನೇ ಮಾ
ಱಾಂತನಣ್ಣನ ಹರಿಬವನು ದಿಟ
ಸೂತ ನೋಡೈ ಸಾಹಸಿಕನೈ ಲೇಸು ಲೇಸೆನುತ
ಆತನಂಬೈದಾಱ ಮನ್ನಿಸಿ
ಸೋತವೊಲು ಮನಗೆಲವ ಮಾಡಿ ನಿ
ಶಾತಶರದಿಂದಿಳುಹಿದನು ಶಲ್ಯಾನುಜನ ಶಿರವ ೨೨

ದೊರೆ ಮಡಿಯೆ ಮಾದ್ರಾನುಜನ ಬಲ
ತಿರುಗಿತಭಿಮನ್ಯುವಿನ ಹೊಯ್ಲಲಿ
ಹುರುಳುಗೆಟ್ಟುದು ಹೆಸರ ನಾಯಕವಾಡಿ ದುಗುಡದಲಿ
ತರಹರವ ನಾ ಕಾಣೆನೀ ಮೋ
ಹರಕೆ ಗತಿಯೇನೆನುತ ಭರದಲಿ
ಕರೆದು ತೋಱಿದನಾ ಕೃಪಾಚಾರ್ಯಂಗೆ ಕಲಿ ದ್ರೋಣ ೨೩

ಮಗುವೆ ನೋಡಭಿಮನ್ಯು ನಮಗಿದು
ಹೊಗುವಡಳವೇ ಕಾಲರುದ್ರನ
ತಗಹು ಬಿಟ್ಟಂತಿದೆ ಕುಮಾರನ ಕೋಪದಾಟೋಪ
ಮೊಗಸಲರಿದು ಭುಜಪ್ರತಾಪದ
ಹೊಗರು ಹೊಸಪರಿಯೆನುತ ರಿಪುಗಳ
ಹೊಗಳುತಿರೆ ಕೇಳಿದನು ಕೌರವ ರಾಯನೀ ನುಡಿಯ ೧೪

ಕೇಳುತಿರ್ದ್ದೆ ಕರ್ಣ ಸಲೆ ನ
ಮ್ಮಾಳ ಬೆದರಿಸಿ ನುಡಿದು ರಿಪುಭಟ
ನಾಳನೇರಿಸಿ ನುಡಿವ ಬಾಹಿರರೇನು ಹೇಳುವೆನು
ಖೂಳರೆಂಬೆವೆ ಗುರುಗಳಿಂದು ವಿ
ಶಾಲಮತಿಗಳು ತಮ್ಮ ಭಾಗ್ಯದ
ಮೇಲೆ ದೈವವನೆಂದು ಫಲವೇನೆನುತ ಬಿಸುಸುಯ್ದ ೧೫

ವೀರರಂಗವನೆತ್ತ ಬಲ್ಲರು
ಹಾರುವರು ಬೆಳದಿಂಗಳಿನ ಬಿಙು
ಸಾರ ಸುಡುವುದು ಕೈದು ಹಿಡಿದಿರೆ ಕಲಿಗಳೇ ದ್ವಿಜರು
ವೈರಿಭಟನಿವ ಮಗುವಲಾ ಮನ
ವಾರೆ ಕಾದಲು ಲಕ್ಷ್ಯವಿಲ್ಲೀ
ಯೂರುಗರ ಬೈದೇನು ಫಲವೆಂದರಸ ಹೊಙವಂಟ ೧೬

ಎನಲು ದುಶ್ಶಾಸನನು ರಾಯನ
ಕನಲಿದನು ಖತಿಯೇಕೆ ಜೀಯಿಂ
ದಿನಿಗೆ ಬೆಸಸಾ ಸಾಕು ಭಂಡರ ಬೈದು ಫಲವೇನು
ದಿನಪ ದೀವಿಗೆಯಾಗಲುಳಿದೀ
ಬಿನುಗು ಬೆಳಗಿನ ಹಂಗು ಬೇಕುದೆ
ದನುಜ ದಿವಿಜರ ದಳಕೆ ತನ್ನನು ಬಿಟ್ಟು ನೋಡೆಂದ ೧೭

ತಳಿತುದೆಡಬಲವಂಕದಲಿ ಹೆ
ಬ್ಬಲ ಛಡಾಳಿಸಿ ಮೊರೆದ ಭೇರಿಯ
ಘುಳುಘುಳುಧ್ವನಿ ಕೂಡೆ ಜಡಿದುದು ಕಮಲಜಾಂಡಘಟ
ಹಳವಿಗೆಯ ಸೀಗುರಿಯ ಚಮರಾ
ವಳಿಯ ವಿಮಳಛತ್ರಪಙ್ತ್ತಿಯ
ವಳಯದಲಿ ನಭ ಮುಳುಗೆ ಮುತ್ತಿತು ಸೇನೆ ರಿಪುಭಟನ ೨೮

ತಿರುಹು ತೇಜಿಯನಿತ್ತಲಿವದಿರ
ನೊರಸಿ ದುಶ್ಯಾಸನನ ಬೆನ್ನಲಿ
ಕರುಳು ತೆಗೆವೆನು ನೋಡು ಸಾರಥಿ ಬೆಚ್ಚಬೇಡೆನುತ
ಅರಗಿನರಸನ ಬಾಗಿಲಲಿ ದ
ಳ್ಳುರಿಗೆ ತಡವೇ ಹೊಕ್ಕು ನಿಮಿಷದೊ
ಳೊರಸಿದನು ಚತುರಂಗಬಲವನು ಕೌರವಾನುಜನ ೨೯

ಎಲವೊ ಕೌರವ ಕೊಬ್ಬಿ ನರಿ ಹೆ
ಬ್ಬುಲಿಯ ಕೂಸನು ಬೇಡುವಂದದಿ
ಅಳವನಱಿಯದೆ ಅಧಮ ರಥಿಕರ ಕೂಡೆ ತೊಡಕುವರೆ
ಮಲೆತು ನೀನೆನ್ನೊಡನೆ ರಣದಲಿ
ಹಳಚಿ ನೀ ತಲೆವೆರಸಿ ಮರಳಿದ
ಡಿಳುಹುವೆನು ಕೈದುವನು ಶರಸನ್ಯಾಸ ನನಗೆಂದ ೩೦

ಸಾಕು ತರುವಲಿತನದ ಮಾತುಗ
ಳೇಕೆ ಗರುವರ ಮುಂದೆ ವೀರೋ
ದ್ರೇಕದಲಿ ಮೈಮಱೆದು ರಣದಲಿ ಹೊಯ್ದು ಹೊಟ್ಟುಗರ
ಆ ಕಿರೀಟವೃಕೋದರರು ಮೈ
ಸೋಕಿದರೆ ಸಂತೋಷ ನೀನವಿ
ವೇಕಿ ಬಾಲಕನೇನ ಮಾಡುವೆನೆಂದನವ ನಗುತ ೩೧

ಕೊಱಚೆನೀರೊಳಗಾಳುತೇಳುತ
ಜಲಧಿ ಕಾಲ್ವೊಳೆಯೆಂಬ ಭಂಡರ
ಮುಳಿದು ಮಾಡುವುದೇನು ಮೊದಲಲಿ ನಮ್ಮ ನೀ ಗೆಲಿದು
ಬಳಿಕ ಭೀಮಾರ್ಜುನರ ಬಯಸುವು
ದೆಲೆ ಮರುಳೆ ನಿನ್ನೊಡಲ ಸೀಳಿಯೆ
ತಿಳಿರಕುತದಲಿ ತಾಯ ತುಱುಬನು ನಾದಿಸುವೆನೆಂದ ೩೨

ಕಾತರಿಸದಿರು ಬಾಲಭಾಷೆಗ
ಳೀತಕಿವು ನೀ ಕಲಿತ ಬಿಲುವಿ
ದ್ಯಾತಿಶಯವುಂಟಾದಡೆಮ್ಮೊಳು ತೋಱು ಕೈಗುಣವ
ಭೀತ ಭಟರನು ಹೊಳ್ಳುಗಳೆದ ಮ
ದಾತಿರೇಕದ ಠಾವಿದಲ್ಲೆಂ
ದೀತನೆಚ್ಚನು ನೂಱುಬಾಣದಲಿಂದ್ರ ಸುತಸುತನ ೩೩

ಆವನ ನೂಱಂಬುಗಳ ಕಡಿದವ
ನವಯುವನ ಕೀಲಿಸಿದಡಾಕ್ಷಣ
ವವನಿಯಲಿ ಬಲುಗರುಳು ಬಿದ್ದವು ಭಟನ ಕಿಬ್ಬರಿಯ
ಆವಗಡಿಸಿ ಖಾತಿಯಲಿ ಖಳ ಶರ
ನಿವಹವನು ತುಡುಕಿದನು ಕೊಡಹಿದ
ವವನು ನಿಮಿಷದೊಳರ್ಜುನಾತ್ಮಕನಗಣಿತಾಸ್ತ್ರಗಳು ೩೪

ತಾಯ ತುಱುಬಿಗೆ ಹಾಯ್ದ ಪಾತಕಿ
ನಾಯ ಕೊಂಡಾಡುವರೆ ಕೊಬ್ಬಿದ
ಕಾಯವನು ಕದುಕಿಱಿದು ನೆತ್ತರ ನೊರೆಯ ಬಾಸಣಿಸಿ
ತಾಯ ಕರಸುವೆನೆನುತ ಕಮಳದ
ಳಾಯತಾಂಬಕನಳಿಯನನುಪಮ
ಸಾಯಕವ ಹೂಡಿದನು ನೋಡಿದನೊಂದು ಚಿತ್ತದಲಿ ೩೫

ಇವನ ಕೊಂದರೆ ತಂದೆ ಮಿಗೆ ಮೆ
ಚ್ಚುವನೊ ಮುನಿವನೊ ತನ್ನ ನುಡಿ ಸಂ
ಭವಿಸದೆಂಬನೊ ಭೀಮಸೇನನ ಭಾಷೆಗಂಜುವೆಸು
ಇವನ ತಾನೇ ಕೊಲಲಿ ನಮಗಿ
ನ್ನಿವನ ತೊಡಕೇ ಬೇಡ ಕದನದೊ
ಳಿವನ ಭಂಗಿಸಿ ಬಿಡುವೆನೆಂದಸು ತನ್ನ ಮನದೊಳಗೆ ೩೬

ಕಾಯ್ದುಕೊಳ್ಳೈ ಕೌರವಾನುಜ
ಹೊಯ್ದು ಹೋಗಲು ಬಹುದೆ ಹರನಡ
ಹಾಯ್ದಡೆಯು ಗೆಲುವೆನು ಕಣಾ ನಿಲ್ಲೆನುತ ತೆಗೆದೆಸಲು
ಬಾಯ್ದೆಗೆದು ಕೇಸುರಿಯ ಕಾಱುತ
ಕೈದುವೆದೆಯಲಿ ಕೊಂಡು ಬೆನ್ನಲಿ
ಹಾಯ್ದಡವನೊರ್ಗುಡಿಸಿದನು ಕುರುಸೇನೆ ಕಳವಳಿಸೆ ೩೭

ಅಹಹ ಕೈತಪ್ಪಾಯ್ತು ರಾಯನ
ಸಹಭವನು ನೊಂದನು ಶಿವಾ ಎನು
ತಹಿತಸುಭಟರು ಸರಿಯೆ ಸಾರಥಿ ತಿರುಹಿದನು ರಥವ
ಬಹಳ ಬಲ ನುಗ್ಗಾಯ್ತು ಶಿಶುವಿನ
ಸಹಸ ಕುಂದದೆನುತ್ತ ಖತಿಯಲಿ
ಮಿಹಿರಸುತನಡಹಾಯ್ದು ತಡೆದನು ಮತ್ತೆ ಬಾಲಕನ ೩೮

ಸಾರು ಸಾರಭಿಮನ್ಯು ಫಡ ಇ
ನ್ನಾರ ಬಸುಱನು ಹೊಗುವೆ ನಿನ್ನವ
ರಾರ ಸಂತತಿ ಮಾಡಿಕೊಳಲಿ ಭವತ್‌ಪರೋಕ್ಷದಲಿ
ಭೂರಿಬಲವನು ಸದೆವ ಗರ್ವಿ
ದಾರ ಕೂಡೆ ಧನುರ್ಧರಾಗ್ರಣಿ
ವೀರಕರ್ಣ ಕಣಾ ಎನುತ ತೆಗೆದೆಚ್ಚನತಿರಥನ ೩೯

ಬಲೆನುಂಟುಂಟಖಿಳ ವೀರರೊ
ಳಿಲ್ಲ ಸರಿದೊರೆ ನಿನಗೆ ಬಾಯಲಿ
ಬಲ್ಲಿದನು ನೀನಹೆ ಭಟಾಂಗದ ಮಾತದಂತಿರಲಿ
ಒಳ್ಳೆ ಗಡ ಪಾವುಡವ ವಾಸುಗಿ
ಯಲ್ಲಿಗಟ್ಟಿತು ಗಡ ಮಹಾಹವ
ಮಲ್ಲ ಮಡಮುಱಿಯದಿರೆನುತ ಹೊಕ್ಕೆಚ್ಚನಭಿಮನ್ಯು ೪೦

ಇರುಳ ರಾಯನ ಮನೆಗೆ ಕಪ್ಪವ
ತೆಱುವುದೋ ಹಗಲೆಲವೊ ಕೆಲಬರ
ನಿಱಿದ ದರ್ಪವದಾರೊಡನೆ ಫಡ ಮರಳು ಮರಳೆನುತ
ಕಿಱುಮೊನೆಯ ಮುಗುಳಂಬುಗಳ ಸೈ
ಗಱೆದನಭಿಮನ್ಯುವಿನ ಮೆಯ್ಯಲಿ
ತುಱುಗಿದವು ಮಱಿದುಂಬಿ ಕೆಂದಾವರೆಗೆ ಕವಿವಂತೆ ೪೧

ಸುರಪನಂಕುಶವಾಕಿದರೆ ಮೆ
ಯ್ಯಱಿಯದೈರಾವತಕೆ ಕಬ್ಬಿನ
ಲಿಱಿದರಂಜಿಕೆಯುಂಟೆ ನಿನ್ನಯ ಕಣೆಗಳಾಕಿದರೆ
ತೆರಳುವನೆ ಅಭಿಮನ್ಯುವೆನುತ
ಬ್ಬರಿಸಿ ಕರ್ಣನ ಕಾಯವನು ಹುಗಿ
ಲಿಱಿದನೆಂಟಂಬಿನಲಿ ತೋದುದು ತೇರು ರಕ್ತವಲಿ ೪೨

ಮಳೆಗೆ ಮೊಗದಿರುಹುವುದೆ ಬಡಬಾ
ನಳನೆಲವೊ ನಿನ್ನಂಬು ತಾಕಿದ
ರಳುಕುವೆನೆ ತಾನೆನುತ ರವಿಸುತನೆಚ್ಚನತಿರಥನ
ಹಿಳುಕು ಕವಿದವು ಭಟನ ಕೈ ಮೈ
ಗಳಲಿ ಮಿನುಗಿದವಿರುಳು ಮರನಲಿ
ಹೊಳೆದು ಮುತ್ತಿದ ಮಿಂಚುಬುಳುವಿನ ಮಿನುಗಿನಂದದಲಿ ೪೩

ಹೂಣಿಗರು ಕೆಲರಿವರು ಇವದಿರ
ಗೋಣನರಿವರೆ ಇವರ ಜೀವದ
ಕೇಣಿಕಾಱರು ಖಾತಿಗೊಂಬರು ಭೀಮಫಲುಗುಣರು
ಮಾಣದಿವದಿರು ಮತ್ತೆ ರಣದಲಿ
ಕಾಣೆನಿದಕಿನ್ನನುವನೆನುತ
ಕ್ಷೀಣಭುಜಬಲನೆಚ್ಚು ಕಡಿದನು ಸೂತಜನ ಧನುವ ೪೪

ಕೈದು ಮುಱಿಯಲು ಮುಂದೆ ನೂಕದೆ
ಹಾಯ್ದನಾ ರವಿಸೂನು ಬಳಿಕಡ
ಹಾಯ್ದು ತಡೆದನು ಬವರವನು ಕರ್ಣಾತ್ಮಜನು ಕಡುಗಿ
ಐದು ಬಾಣದಲವನ ಕೊರಳನು
ಕೊಯ್ದನರ್ಜುನಸೂನುವಾತನ
ನೊಯ್ದರಂತಕದೂತರದ್ಭುತವಾಯ್ತು ಸಂಗ್ರಾಮ ೪೫

ಘಾಯವಡೆದನು ಶಲ್ಯ ರವಿಸುತ
ನಾಯುಧವ ಬಿಟ್ಟೋಡಿದನು ಕುರು
ರಾಯನನುಜನು ಬದುಕುವರೆ ಮೆಯ್ಯೆಲ್ಲ ಬಾದಣವು
ಸಾಯದುಳಿದವರಿಲ್ಲ ಮಿಕ್ಕಿನ
ನಾಯಕರೊಳಕಟೆನಲು ಕುರುಬಲ
ಬಾಯ ಬಿಡೆ ಶಲ್ಯನ ಕುಮಾರಕ ಹೊಕ್ಕನಾಹವವ ೪೬

ಭಟ ಭಡಾಳಿಸಿದನು ಘೃತಾಹುತಿ
ಘಟಿಸಿದಗ್ನಿಯಃವೋಲು ರಣ ಚೌ
ಪಟ ಚತುರ್ಬಲದೊಳಗೆ ಹೊಕ್ಕನು ಸಿಂಹನಾದದಲಿ
ನಿಟಿಲನೇತ್ರನ ಕೋಪಶಿಖಿ ಲಟ
ಕಟಿಸುವಂತಿರೆ ಹೆಚ್ಚಿದತಿಬಲ
ದಟವಿಯನು ಸವಱಿದುದು ಪಾರ್ಥಕುಮಾರಶರಜಾಲ ೪೭

ಧರೆ ಬಿರಿಯೆ ಬೊಬ್ಬೆಯಲಿ ಬಲದ
ಬ್ಬರಣೆ ದೆಖ್ಖಾದೆಖ್ಖೆಯಾಗಲು
ಧರಣಿಪತಿ ಮಱುಗಿದನು ಮಗನೇನಾದನೋ ಎನುತ
ಕರೆದು ಭೀಮನ ನಕುಳನನು ಸಂ
ಗರಕೆ ಧೃಷ್ಟದ್ಯುಮ್ನದ್ರುಪದರ
ಪರುಠವಿಸಿ ಕಳುಹಿಸಿದನು ಸೌಭದ್ರಂಗೆ ಪಡಿಬಲವ ೪೮

ಗದೆಯ ತಿರುಹುತ ಸಿಂಹನಾದದ
ಲೊದಱಿ ಮಗನಾವೆಡೆಯೆನುತ ನೂ
ಕಿದನು ರಥವನು ತನ್ನ ಸೇನೆಗೆ ಸೀಗುರಿಯ ಬೀಸಿ
ಅದಟನೈತರೆ ಹೋಗಲೀಯದೆ
ಮೊದಲ ಬಾಗಿಲ ಕಟ್ಟಿಕೊಂಡ
ಗ್ಗದ ಜಯದ್ರಥ ಭೀಮನೊಳು ಬಲುಗಾಳೆಗವ ಹಿಡಿದ ೪೯

ತೆಱಹುಗೊಡು ಫಡ ಫಡ ಜಯದ್ರಥ
ಹೆಱತೆಗೆದು ಸಾರೆನುತ ಹೂಣಿಗ
ನುಱುಬಿದರೆ ಮಾಱಾಂತು ಭೀಮನ ಕಡುಹ ನಿಲಿಸಿದನು
ಮಱೆದು ಕಳೆಯಭಿಮನ್ಯುವನು ವೈ
ಮಱೆಯದೆನ್ನಲಿ ಕಾದು ಮಾತಿನ
ಬಿಱುಬಿನಲಿ ಫಲವಿಲ್ಲೆನುತ ಕೆಂಗೋಲ ತೊಡಚಿದನು ೫೦

ಬವರದಲಿ ಕಲಿಪಾರ್ಥನಲ್ಲದೆ
ಪವನತನಯಾದಿಗಳ ಗೆಲುವರೆ
ಶಿವನ ಕೃಪೆಯೆನಗುಂಟು ಮುನ್ನೆನುತಾ ಜಯದ್ರಥನು
ಕವಲುಗೋಲಲಿ ಭೀಮನನು ಪರಿ
ಭವಿಸಿದನು ಸಹದೇವ ನಕುಳರ
ಶಿವಿದು ಧೃಷ್ಟದ್ಯುಮ್ನ ಮೊದಲಾದಗಣಿತರ ಗೆಲಿದ ೫೧

ಪಡಿಬಲವ ಬರಲೀಯದನಿಲಜ
ನೊಡನೆ ಸೈಂಧವ ಕಾದುತಿರಲಿ
ನ್ಮಡಿಸಿತಾಹವವಿತ್ತ ವೋಹರ ಮಧ್ಯರಂಗದಲಿ
ಕಡುಗಿ ನೂಕುವ ಕದನರಾಗಿಗ
ಳೊಡನೆ ಕಾದುವ ಪಾರ್ಥತನಯನ
ಬಿಡಿಸರಳು ಬೀಱಿದವು ರವಣರನಮರವಧುಗಳಿಗೆ ೫೨

ಒರಸಿದನು ಹದಿನೆಂಟುಸಾವಿರ
ಕರಿಘಟೆಯನೈವತ್ತು ಸಾವಿರ
ತುರಗವನು ಮೂವತ್ತುಸಾವಿರ ವರಮಹಾರಥರ

ಧುರದಿ ಲಕ್ಷಪದಾತಿಯನು ಸಂ
ಹರಿಸಿ ಶಲ್ಯಕುಮಾರಕನ ಕ
ತ್ತರಿಸಿದನು ಗೋನಾಳಿಯನು ದಿವ್ಯಾಸ್ತ್ರಧಾರೆಯಲಿ ೫೩

ಮಡಿದನಕಟಾ ತಮ್ಮ ಸಖನೆಂ
ದಡಸಿದಳಲಿನೊಳೆದ್ದು ಕೋಪದ
ಕಡುಝುಳದ ಕಾಲಾಗ್ನಿ ರುದ್ರನ ಕಣ್ಣ ಹೋಲುವೆಯ
ಸಿಡಿದ ಮೀಸೆಯ ಬಿಗಿದ ಹುಬ್ಬಿನ
ಜಡಿವ ರೋಮಾಂಚನದ ಖಾತಿಯ
ಕಡುಹುಕಾಱರು ಮುಸಗಿದರು ದುರ್ಯೋಧನಾತ್ಮಕರು ೫೪

ಭಾಪುರೇ ಕೌರವನ ಸುತರಾ
ಟೋಪವೊಳ್ಳಿತು ಬಂದ ಬರವಿನ
ಚಾಪಳದಲೊದಗಿದರೆ ಲೇಸಲ್ಲಿದರ ಫಲವೇನು
ಕಾಪುರುಷರೇ ಕಾಣಬಹುದೆಂ
ದಾ ಪುರಂದರಸುತನಸುತ ನಿಜ
ಚಾಪವನು ನೇವರಿಸುತಿದ್ದನು ಬಗೆಯದರಿಬಲವ ೫೫

ಮಗುಳದಿರು ಶಲ್ಯಾತ್ಮಕನನುಗು
ಳುಗುಳು ನಿನ್ನಯ ಬಸಿಱ ಸೀಳಿಯೆ
ತೆಗೆವೆವೆಮ್ಮಯ ಸಖನನೆನುತಾ ಲಕ್ಷಣಾದಿಗಳು
ತೆಗೆದೆಸುತ ಮೇಲಿಕ್ಕಿದರು ತಾ
ರೆಗಳು ನೆಣಗೊಬ್ಬಿನಲಿ ರಾಹುವ
ತೆಗೆದು ಬದುಕಲು ಬಲ್ಲವೇ ಧೃತರಾಷ್ಟ್ರ ಕೇಳೆಂದ ೫೬

ಆ ಸುಯೋಧನ ಸುತರ ಸರಳ ವಿ
ಳಾಸವನು ಖಂಡಿಸಿದನವದಿರ
ಬೀಸರಕೆ ಬಂದಡ್ಡಬೀಳುವ ಭಟರ ಕೆಡೆಯೆಚ್ಚ
ರೋಷವಹ್ನಿಯ ಕೆದಱಿ ಕವಿವ ಮ
ಹೀಶರನು ಮಾಣಿಸಿದನವನೀ
ವಾಸವನು ವಾಸವನಮೊಮ್ಮನುದಾರಸಮರದಲಿ ೫೭

ಸರಳಮೊನೆಯಲಿ ವೈರಿಸುಭಟರ
ಕರುಳ ತೆಗೆದನು ರಣದೊಳಾಡುವ
ಮರುಳುಬಳಗವ ತಣಿಸಿದನು ಕಡಲಾದುದರುಣಜಲ
ತರಳನಜಿಯಟ್ಟಿದನು ಧುರದಲಿ
ದುರುಳ ದುರಿಯೋಧನನ ಮಕ್ಕಳ
ಮರಳಲೀಯದೆ ಭಟರ ಕೇಣಿಯ ಕೊಂಡನಭಿಮನ್ಯು ೫೮

ಉರಗನಿಕ್ಕಡಿಗಾಱ ಹುಲ್ಲಿನ
ಸರವಿಗಂಜುವುದುಂಟೆ ಕರ್ಣಾ
ದ್ಯರನು ಕಡ್ಡಿಗೆ ಬಗೆಯನೀ ಹೂಹೆಗಳ ಗಣಿಸುವನೆ
ಎರಡು ಶರದಲಿ ಲಕ್ಷಣನ ಸಂ
ಹರಿಸಿದನು ಹದಿನೈದು ಬಾಣದ
ಲರಿದನುಳಿದ ಕುಮಾರಕರನಭಿಮನ್ಯು ನಿಮಿಷದಲಿ ೫೯

ತಳಿತ ಚೂತದ ಸಸಿಗಳವನಿಗೆ
ಮಲಗುವಂತಿರೆ ರಾಜಪುತ್ರರು
ಹೊಳೆವ ಪದಕದ ಕೊರಳ ತಲೆಗಿಂಬಾದ ತೋಳುಗಳ
ಬಳಿರಕುತದಲಿ ನನೆದ ಸೀರೆಯ
ತಳಿತ ಖಂಡದ ಬಿಗಿದ ಹುಬ್ಬಿನ
ದಳಿತ ದಂಷ್ಟ್ರಾನನದಲೆಸೆದರು ಸಾಲ ಶಯನದಲಿ ೬೦

ಇಕ್ಕಿದಿರಲಾ ರಾಜಪುತ್ರರ
ನಕ್ಕಟಕಟಾ ಸ್ವಾಮಿದ್ರೋಹರು
ಹೊಕ್ಕ ಮನೆ ಹಾಳಹುದಲಾ ದ್ರೋಣಾದಿನಾಯಕರು
ಹಕ್ಕಲಾದುದು ನಮ್ಮ ಬಲ ಶಿಶು
ಸಿಕ್ಕನಿನ್ನೂ ಪಾಂಡವರ ಪು
ಣ್ಯಕ್ಕೆ ಸರಿಯಿಲ್ಲೆನುತ ಕೌರವರಾಯ ಗರ್ಜಿಸಿದ ೬೧

ಕುಲವ ನೋಡಿದಡಿಲ್ಲ ತನ್ನಯ
ಬಲುಹ ನೋಡಿದಡಿಲ್ಲ ಕದನದೊ
ಳುಳಿವ ನೋಡಿದರಿಲ್ಲಲಾ ಪತಿಯೆಂಬ ಪಾತಕಿಯ
ಇಳೆಯೊಳೋಲೆಯಕಾಱರೆಂಬರ
ತಲೆಗೆ ತಂದನು ತೃಣವನೆಂದ
ಗ್ಗಳೆಯರನು ಮೂದಲಿಸಿ ಬಯ್ದನು ಸುಯ್ದು ಕುರುರಾಯ ೬೨

ಕೇಳುತಿದ್ದರು ಪತಿಯ ಮೂದಲೆ
ಗಾಳಿಯಲೆ ಧಳ್ಳಿಸುವ ಶೌರ್ಯ
ಜ್ವಾಲೆ ಜಡಿದುದು ಖಾತಿಯಲಿ ಹೊಗರೇಱಿದಾನನದ
ಆಳುತನವುಬ್ಬೆದ್ದು ಕಡುಹೀ
ಹಾಳಿಕಾಱರು ಕೈದುಕೊಂಡರು
ಬಾಲಕನ ತಱುಬಿದರು ದೊರೆಗಳು ಕೇಳು ಧೃತರಾಷ್ಟ್ರ ೬೩

## ೪. ಸಿಡಿಲು ಜಂಗಮವಾಯ್ತೊ

ಮೇರೆದಪ್ಪಿತು ಕೌರವನ ಪರಿ
ವಾರದಲಿ ಬೇಹವರು ಮಕುಟದ
ಬಾರಿಯಾಳುಗಳಾಂತುಕೊಂಡರು ಪಾರ್ಥನಂದನನ
ಸೂರಿಯನಸುತ ಶಲ್ಯ ಗೌತಮ
ಕೌರವಾನುಜನುಭಯಕಟಕಾ
ಚಾರ್ಯನಶ್ವತ್ಥಾಮನಿವರೊಗ್ಗಾಯ್ತು ಷಡುರಥರು ೧

ಆಳವಿಗೊಟ್ಟುದು ಮತ್ತೆ ಕೌರವ
ಬಲಪಯೋನಿಧಿವೈರಿ ಬಡಬನ
ಬಿಲು ಸರಳು ಬಿರುಗಿಡಿಯಲೌಕಿತು ಚಾತುರಂಗದಲಿ
ಎಲೆಲೆ ಬೆಂಗಾಹಿನಲಿ ಸೂಕುವ
ಬಲ ಸಮರ್ಥರ ಜೋಕೆಯಲಿ ಕುರು
ಬಲಕೆ ಕದನಾಳಾಪವಾಯ್ತೆಸುತೆಚ್ಚನಭಿಮನ್ಯು ೨

ಹಳಚಿ ಮುರಿದುದು ವೀರಕರ್ಣನ
ಬಲ ಕೃಪಾಚಾರಿಯರ ಸೇನೆಗೆ
ತಲೆಯ ಋಣಸಂಬಂಧ ಸವೆದುದು ಕಾತರಿಸಿ ಕವಿವ
ಬಲವ ಬಿರುದರಿಗಮರನಾರಿಯ
ರೊಳಗೆ ಸೇರುವೆಯಾಯ್ತು ಶಲ್ಯನ
ಬಲದಡಗು ಸವಿಯಾಯ್ತು ಜಂಬುಕಕಾಕಸಂತತಿಗೆ ೩

ಪಡೆಯ ತೆಗೆ ತರುವಲಿಯ ಕೊಲ್ಲದೆ
ಹಿಡಿಯೆನುತ ಬಿಱುಸರಳ ತಿರುವಿನ
ಲಡಸಿ ಸೂತರಿಗಱುಹಿ ಕೆಲಬಲದವರ ಕೈವೀಸಿ
ಕಡುಮನದ ಕೈಚಳಕಿಗರು ಮುಂ
ಗುಡಿಯಲೈತರೆ ರವಿಸುತಾದಿಗ
ಳೊಡನೊಡನೆ ಕೈಕೊಂಡರಿಂದ್ರಕುಮಾರನಂದನನ ೪

ಶಿಶುತನದ ಸಾಮರ್ಥ್ಯ ಸಾಕಿ
ನ್ನೆಸದಿರೆಲವೋ ಮರಳು ಮರಳೆಂ
ದಸಮಬಲರೈದಿದರು ಷಡುರಥರೊಂದುಮುಖವಾಗಿ
ಎಸುಗೆ ನಿಮಗೆಂದಾಯ್ತು ನಿದ್ರೆಯ
ಮುಸುಕಿನಲಿ ಗೋಗ್ರಹಣದಲಿ ಜೀ
ವಿಸಿದ ಜಾಣರು ನೀವೆನುತ್ತಿದಿರಾದನಭಿಮನ್ಯು ೫

ತರಳತನದಲಿ ನುಡಿಯದಿರು ಸಂ
ಗರಕೆ ಕರೆ ನಿಮ್ಮಯ್ಯನನು ಹೊಸ
ಸರಳು ನಾಚುವವಲ್ಲ ಶಿಶುವಧೆಯೆಂಬುದಪವಾದ
ಮರಳುವುದು ಲೇಸೆನುತ ಷಡುರಥ
ರುರವಣಿಸಿದರು ಬಿಗಿದ ಬಿಲ್ಲಿನ
ಗರುಡಿಕಾಱನ ಕೂಡ ನೂಕಿತು ರವಿಸುತಾದಿಗಳು ೬

ಪಾರ್ಥಪರಿಯಂತೇಕೆ ಸಮರ
ವ್ಯರ್ಥಜೀವರು ನೀವು ಕೌರವ
ನರ್ಥವನು ಸಲೆ ತಿಂಬುದಲ್ಲದೆ ಸಮರ ನಿಮಗೇಕೆ
ಸ್ವಾರ್ಥಲೋಲುಪ್ತಿಯಲಿ ನಿಲುವ ಸ
ಮರ್ಥರಾದರೆ ಬಾಣಧಾರಾ
ತೀರ್ಥದೊಳಗೋಲಾಡಿಸುವೆನೆಂದೆಚ್ಚನಭಿಮನ್ಯು ೭

ಮನದ ಕೆಚ್ಚುಳ್ಳದಟನಹೆ ಮಾ
ತಿನ ಸಘಾಡಿಕೆ ಲೇಸು ಪಾರ್ಥನ
ತನಯನಲ್ಲಾ ಪೂತು ಪಾಯಿಕು ಎನುತ ಷಡುರಥರು
ತನತನಗೆ ಕೆಂಗೋಲಿಸಲಿ ಮು
ಮ್ಮೊನೆಯ ಬೋಳೆಯ ಸರಳಿನಲಿ ಸಾ
ಧನಸಮಗ್ರರು ಶಿಸುವನೆಚ್ಚರು ದೆಸೆದೆಸೆಗೆ ಕವಿದು ೮

ಮಸಗಿ ಮದದಾನೆಗಳು ಸಿಂಹದ
ಶಿಶುವ ಮುತ್ತುವವೋಲು ಕವಿಕವಿ
ದೆಸುತ ಬಂದರು ಮಕುಟವರ್ಧನರಸಮುಬಾಲಕನ
ನುಸುಳದವರವರಸ್ತ್ರವನು ಖಂ
ಡಿಸುತ ಸನ್ನಾಹದಲಿ ಘನಪೌ
ರುಷದಲೆಚ್ಚಾಡಿದನು ಹಲಬರ ಕೂಡೆ ಸುಕುಮಾರ ೯

ಕೋಡಿದನೆ ಕೊಂಕಿದನೆ ನಾಯಕ
ವಾಡಿಗಳು ಹಲರೆಂದು ಬೆಂಗೊ
ಟ್ಟೋಡಿದನೆ ಕೈಗಾಯದೆಚ್ಚನು ನಚ್ಚಿದಂಬಿನಲಿ
ತೋಡು ಬೀಡಿನ ಹವಣನಾತನ
ಮಾಡಿದಾತನೆ ಬಲ್ಲನೆನೆ ಕೈ
ಮಾಡಿ ಸುರಿದನು ಸರಳಮಳೆಯ ಮಹಾರಥರ ಮೇಲೆ ೧೦

ಪೂತು ಮಝು ಬಿಲ್ಲಾಳುತನವಿದು
ಭೂತನಾಥಂಗಿಲ್ಲ ಸುಭಟ
ವ್ರಾತವೀಕ್ಷಿಸಲರಿದೆನುತ ಕಣೆಗೆದಱಿದನು ದ್ರೋಣ
ಏತಕಿದು ಹಿಮ್ಮೆಟ್ಟಿ ದಿಟ ನೀ
ಸೋತಡೆಯು ಜಯವಿಲ್ಲೆಮಗೆ ಮೃಗ
ಪೋತನನು ಹರಿಹೊಯ್ವುದುಚಿತವೆ ಮಗನೆ ಕೇಳೆಂದ ೧೧

ವಿನಯವೇಕಿದು ನಿಮ್ಮ ಭುಜಬಲ
ಪನುವ ಬಲ್ಲೆನು ನಿಮ್ಮ ಕೈಮೈ
ತನದ ಹವಣನು ಕಾಬೆನೆನ್ನೊಳು ಸೆಣಸಿಜಯಿಸಿವರೆ
ಧನುವ ಹಿಡಿಯೆನು ಸಾಕು ಡೊಂಬನ
ಬಿನುಗುನುಡಿಯಂತಿರಲಿ ಬಲ್ಲಡೆ
ಮೊನೆಗಣೆಯಲೇ ಮಾತನಾಡೆಂದೆಚ್ಚನಭಿಮನ್ಯು ೧೨

ಎಡದೊಳಾಕುವ ಕೃಪನನೆಚ್ಚನು
ತಡೆಯಲಶ್ವತ್ಥಾಮನನು ರಥ
ಕೆಡೆಯಲೆಚ್ಚನು ತೊಡಚಿ ಕೈಯಲಿ ಕೌರವಾನುಜನ
ಮಿಡುಕಲೆಚ್ಚನು ಹಿಂದುಮುಂದವ
ಗಡಿಸಿದಾ ಮಾದ್ರೇಯ ರವಿಸುತ
ರೊಡಲೊಳಂಬನು ಹೂಳಿದನು ಸೀಳಿದನು ಸಮರಥರ ೧೩

ಅಡಸಿ ಹೊಕ್ಕರೆ ಕೃಪನ ರಥವನು
ಕಡಿದು ಬಿಸುಟನು ಗುರುಸುತನನಡಿ
ಮಿಡುಕಲೀಯದೆ ಬಿಗಿದು ಕರ್ಣನ ಧನುವ ಖಂಡಿಸಿದ
ಕೊಡಹಿದನು ಕೌರವನ ರಥವನು
ತುಡುಕಲೀಯದೆ ದ್ರೋಣನನು ಜವ
ಗೆಡಿಸಿದನು ಜೋಡಿಸಿದ ಷಡುರಥರೊಗ್ಗನೊಡೆಹೊಯ್ದ ೧೪

ವಡಬಗೌತಣವಿಕ್ಕುವರೆ ಕಡ
ಲೊಡೆಯುಗಹುದು ಸಮರ್ಥನಲ್ಲಾ
ಬಿಡುಗಣೆಯ ಬೀಱುವರೆ ಕಟಕಾಚಾರ್ಯನೆಂದೆನುತ
ಕಡುಮೊನೆಯ ಕೂರಂಬುಗಳ ಮಿಗೆ
ಗಡಣಿಸಿದನೊಗ್ಗೊಡೆದ ಷಡುರಥ
ರೊಡಲೊಳಂಬನು ಹೂಳಿದನು ಕಾಱಿದರು ಶೋಣಿತವ ೧೫

ಹೊಸಕದ ಶೌರಿಯದ ಬಾಳಿಕೆ
ಯೇಸು ದಿನವೈ ಕರ್ಣಕೃಪದು
ಶ್ಯಾಸನರ ಕೊಂಬನೆ ಕುಮಾರಕ ಸುರರಿಗಲಗಣಸು
ಘಾಸಿಯಾದರು ಘಾಯವಡೆದು ವಿ
ಳಾಸವಳಿದುದು ರಿಪುಭಟನ ಗೆಲು
ವಾಸೆ ಬೀತುದು ಧಾತುಗೆಟ್ಟುದು ಸರಳಸಾರದಲಿ ೧೬

ವಿರಥನಾದನು ಕರ್ಣನಂಬಿಗೆ
ತಿರುಹಿ ಬಿಲ್ಲನು ತೊಟ್ಟನಾ ಗುರು
ಗುರುತನೂಜನು ತನ್ನ ಸೂತನ ಶಿರವ ಹಱಿಯೆಚ್ಚ
ಸುರಗಿಯನು ಬಿಸುಟೋಱಿಯ ತಿರುಹಿದ
ನರಸನನುಜನು ಕೃಪನು ಶಲ್ಯನು
ಕೊರಳಲಸುಗಳ ಹಿಡಿದು ಹಂಗಿಗರಾದರೊಡೆಯಂಗೆ ೧೭

ಗನ್ನದಲಿ ಗುರು ಜಾಱಿದನು ಕೃಪ
ಮುನ್ನವೇ ಹಿಂಗಿದನು ಕರ್ಣನ
ನಿನ್ನ ಕಂಡವರಾರು ಮೂರ್ಛೆಗೆ ಮೂಱುಬಾರಿಯುದು
ಬೆನ್ನ ತೆತ್ತರು ಬಿರುದರಾತಗೆ
ಕೆನ್ನೆಯೆಡೆಗುಗಿದಂಬುಸಹಿತವೆ
ನಿನ್ನ ಮಗನರನೆಲೆಗೆ ಸರಿದನು ಭೂಪ ಕೇಳೆಂದ ೧೮

ಕೊಂಡು ಬರುತಿದೆ ಭಟರು ಮನ್ನೆಯ
ಗಂಡನಾಗೈ ಜೀಯ ಎನೆ ಖತಿ
ಗೊಂಡು ಕುರುಪತಿ ನೋಡಿದನು ಮೂಗಿನಲಿ ಬೆರಳಿಟ್ಟು
ಭಂಡರೆಂಬೆವೆ ಜಗದ ಗುರುಗಳು
ಗಂಡುಗಲಿಗಳು ವೈರಿಭಟರಿಗೆ
ಹೆಂಡಿರಾಗಲು ಹೋಗಿಸೈ ದಿಟ ಹೋಗಿ ನೀವೆಂದ ೧೯

ಕಾಲ ವಹಿಲವ ಕಲಿಸಲೋಸುಗ
ಕೋಲಗುರು ಜಾಱಿದನು ಶಲ್ಯನ
ಮೇಲುಮುಸುಕನುವಾಯ್ತು ಬಿರುದೇನಾಯ್ತು ಗುರುಸುತನ
ಆಳುವಾಸಿಯು ಕಡುಹು ಕರ್ಣನ
ಬೀಳುಕೊಂಡುದು ಪೂತುಮಝುರೇ
ಬಾಲ ಎಂದವನೀಶ ಮೂದಲಿಸಿದನು ತನ್ನವರ ೨೦

ಇದಿರೊಳೀಶನ ಭಾಳನಯನದ
ಕದಹು ತೆಗೆದಿದೆ ಹಿಂದೆ ಮರಳುವ
ಡಿದೆ ಕೃತಾಂತನ ಕೊಂತವರಸನ ಮೂದಲೆಯ ವಚನ
ಅದಟು ಕೊಳ್ಳದು ರಾಜಸೇವೆಯ
ಪದವಿ ಪಾತಕಫಲವೆನುತ ನೂ
ಕಿದರು ರಥವನು ಹಳಿವು ದರ್ಪದ ಹೇವ ಮಾರಿಗಳು ೨೧

ರಸದ ಬಂಧದ ಬಿಗುಹು ವಹ್ನಿಯ
ಮುಸುಕನುಗಿದುಳಿವುದೆ ಕುಮಾರನ
ಮುಸುಡಮುಂದಕೆ ಬಿದ್ದು ಬದುಕುವರೇ ಮಹಾದೇವ
ಎಸುತ ಹೊಗುವರು ಭಟನ ಘಾಯಕೆ
ಮುಸುಡ ತಿರುಹುವರಡಿಗಡಿಗೆ ಸಾ
ಹಸದ ಸುಂಕಿಗನೊಡನೆ ತಲೆಯೊತ್ತಿದರು ಷಡುರಥರು ೨೨

ಹಱಿದು ಬಿದ್ದವು ಜೋಡು ಮೆಯ್ಯಲಿ
ಮುಱಿದವಗಣಿತಬಾಣದೇಱಿನೊ
ಳೊಱೆದ ರಕುತದ ಧಾರೆ ನಾದಿತು ರಥದ ಹಲಗೆಗಳ
ಅಱಿವು ಮಱೆದಪಕೀರ್ತಿ ನಾರಿಯ
ಸೆಱಗ ಹಿಡಿದರು ಹೇಳಲೇನದ
ನಱಿಯೆನೇಕಾಂತದಲಿ ಕರ್ಣನ ಕರೆದನಾ ದ್ರೋಣ ೨೩

ಇದಿರೊಳಾನುವುದರಿದು ಹಸುಳೆಯ
ಕದನ ಹಂಗಿಗರಾದೆವಾಳ್ದನ
ವದನಕಮಲಕೆ ನಮ್ಮ ಪೌರುಷವಿಂದು ಹಿಮವಾಯ್ತು
ಇದಿರೊಳಾನಿಹೆ ಶಲ್ಯನೆಡವಂ
ಕದಲಿ ಬಲದಲಿ ಕೃಪನಸರಭಾ
ಗದಲಿ ನೀ ಬಂದೆಸು ಕುಮಾರನ ಕರದ ಕಾರ್ಮುಕವ ೨೪

ಚಾಪವೀತನ ಕೈಯಲಿರಲಿ
ನ್ನಾ ಪಿನಾಕಿಗೆ ಗೆಲವು ಘಟಿಸದು
ವೈಪರೀತ್ಯಕೆ ಬೆದಜಲಾಗದು ಸ್ವಾಮಿಕಾರ್ಯವಿದು
ರೂಪುದೋಜದೆ ಬಂದು ಸುಭಟನ
ಚಾಪವನು ಖಂಡಿಸುವುದಿದು ಕುರು
ಭೂಪನುಳಿವೆಂದಿನಸುತನನೊಡಬಡಿಸಿದನು ದ್ರೋಣ ೨೫

ಹಿಂದಣಿಗೆ ತಿರುಗಿದನು ಭಾಸ್ಕರ
ನಂದನನು ಬಲವಂಕದಲಿ ಗುರು
ನಂದನನು ಕೃಪಶಲ್ಯವಾಮದೊಳಿದಿರಲಾ ದ್ರೋಣ
ನಿಂದು ಕದನವ ಕೆಣಕಿದರು ರಿಪು
ಬಂದಿಕಾಜನೊಳೀಜ ಸೂಜಿಗೆ
ಬಂದು ಬಸಿವುತ ಹೋದರನಿಬರು ಬೈದು ರವಿಸುತನ ೨೬

ದಳವು ದಳವುಳವಾಯ್ತು ಕೇಸರ
ದೊಳಗೆ ವಿಸಟಂಬರಿದು ಕರ್ಣಿಕೆ
ಯೊಳಗೆ ಜುಂಗಣಗುಣಿದು ಸಂಗರಜಯದ ಮಡುವಿನಲಿ
ಸಲೆ ಸೊಗಸಿ ತನಿ ಸೊಕ್ಕಿ ದೆಸೆ ಪಟ
ದುಳಿದು ಸೌಭದ್ರೇಯ ಭೃಂಗನ
ಬಿಲುದನಿಯ ಭರವಂಜಿಸಿತು ಜಯಯುವತಿ ವಿರಹಿಗಳ ೨೭

ಆರಯಿದು ಮಗನೆನಿಸುವೀ ಮಮ
ಕಾರವೆನ್ನೊಳು ಮೊಳೆತಡಾ ದಾ
ತಾರನುಳಿವೆನ್ನಿಂದ ತಪ್ಪುವುದೆನುತ ಮನದೊಳಗೆ
ಕೂರಲಗನಾ ಕರ್ಣ ಬರೆಸೆಳೆ
ದಾರಿ ಹಿಂದಣಿನೆಚ್ಚು ಪಾರ್ಥಕು
ಮಾರಕನ ಚಾಪವನು ಮುಕ್ಕಡಿಯಾಗಿ ಖಂಡಿಸಿದ ೨೮

ಉಱುವ ಜಯವಧುವೊಕ್ಕತನದಲಿ
ಮುಱಿದ ಕಡ್ಡಿಯಿದೆನಲು ಕರದಿಂ
ಮುಱಿದು ಬಿದ್ದುದು ಚಾಪವಿಂದ್ರಕುಮಾರನಂಪನನ
ಬೆಱಗಡರಿ ಮುಖದಿರುಹಿ ಹಿಂದಣಿ
ನಿಱಿದ ಕರ್ಣನ ನೋಡಿ ಮುಖದಲಿ
ಕಿಱುನಗೆಯ ಕೇವಣಿಸಿ ನುಡಿದನು ಬೆರಳನೊಲಿದೊಲಿದು ೨೯

ಆವ ಶರಸಂಧಾನ ಲಾಘವ
ದಾವ ಪರಿ ಮಝು ಪೂತು ಪಾಯಿಕು
ದೇವ ಬಿಲ್ಲಾಳೆಂತು ಕಡಿದೈ ಕರ್ಣ ನೀ ಧನುವ
ಈ ವಿವೇಕವಿದಾರ ಸೇರುವೆ
ಯಾವಗಹುದಿದು ಹಿಂದೆ ಬಂದೆಸು
ವೀ ವಿಗಡತನ ನಿನಗೆ ಮೆಱೆವುದು ಕರ್ಣ ಕೇಳೆಂದ ೩೦

ಎನಲು ಲಜ್ಜಿತನಾಗಿ ತಿರುಗಿದ
ನನುವರದಲೀ ಕರ್ಣನಾತನ
ಧನು ಮುಱಿಯೆ ಕೈಕೊಂಡರೀ ದ್ರೋಣಾದಿನಾಯಕರು
ಕನಕರಥವನು ದ್ರೋಣನಾ ಗುರು
ತನುಜ ಸಾರಥಿಯನು ಕೃಪಾಚಾ
ರ‍್ಯನು ತುರಗವನು ಶಲ್ಯ ಕಡಿದನು ಭಟನ ಕೆಕ್ಕೆಯುವ ೩೧

ತುಡುಕುವರೆ ಧನುವಿಲ್ಲ ಮುಂದಡಿ
ಯಿಡಲು ಸಾರಥಿಯಿಲ್ಲ ರಥ ಕಡಿ
ವಡೆದುದಿನ್ನೆಂತೊದಗುವನೊ ಸುಕುಮಾರ ತಾನೆನುತ
ಪಡೆ ಬಿಡದೆ ಬೊಬ್ಬಿಱಿಯೆ ಬೆದಱದೆ
ಕಡುಗಿ ಖಡ್ಗವ ಕೊಂಡು ರಿಪುಗಳ
ಕಡಿದು ಹರಹುತ ಬೀದಿವರಿದನು ಕಣನ ಮಧ್ಯದಲಿ ೩೨

ಈತನಿರೆ ಕಲ್ಪಾಂತರುದ್ರನ
ಮಾತು ಜಗಕೇಕೆನಲು ವೈರಿ
ವ್ರಾತವನು ಮುಂಕೊಂಡು ಹೊಯ್ದನು ಹೊಳೆವ ಖಡುಗದಲಿ
ಸೋತನೇ ಶಿಶು ಷಡುರಥರ ಕರೆ
ಈತನಾರೈ ಹೇಳಿ ಭಯವಿ
ನ್ನೇತಕೆಂದವನೀಶ ಮೂದಲಿಸಿದನು ತನ್ನವರ ೩೩

ಗೆಲಿದರಭಿಮನ್ಯುವನು ತನ್ನವ
ರೆಲವೊ ತಾ ವೀಳೆಯವನೆನುತವೆ
ಮೆಲುನಗೆಯುಲತಿರಥರ ಜಱೆದನು ಕೌರವರ ರಾಯ
ಬಳಿಕ ಎಡಬಲವಂಕದಲಿ ಮುಂ
ಡಳಿಸಿ ಮೋಹರಿಸಿತ್ತು ರಿಪುಬಲ
ಜಲಧಿ ವಡಬನೊಳಾಂತು ತಾಗಿದರಂದು ಷಡುರಥರು ೩೪

ತುಡುಕಿದವು ತೇಜಿಗಳು ವಾಘೆಯ
ಗಡಣದಲಿ ತೂಳಿದವು ದಂತಿಗ
ಳಿಡಬಲದ ಬವರಿಯಲಿ ಮುತ್ತಿತು ಮತ್ತೆ ರಿಪುನಿಕರ
ಕಡುಮುನಿದ ಕಾಲಾಳು ಕಱೆದುದು
ಖಡುಗಧಾರೆಯನೀತನಳವಿಯ
ಕೆಡಿಸಿ ಮೇಲಿಕ್ಕಿದರು ಭೂಪನ ಮೊನೆಯ ನಾಯಕರು ೩೫

ವಿಷವ ಹುಟ್ಟಿಯೊಳೆಱಗಿ ನೊಣ ಜೀ
ವಿಸುವುದೇ ಶಿವ ಶಿವ ಕುಮಾರನ
ಮುಸುಡಮುಂದಕೆ ಬಿದ್ದು ಬದುಕುವುದುಂಟೆ ಭಟನಿಕರ
ಕುಸುರಿದಱಿದನು ಕರಿಘಟೆಯ ನಿ
ಪ್ಪಸರವಲಿ ಕಾಲಾಳುಕುದುರೆಗ
ಳಸುವ ಸೂಱೆಯ ಬಿಟ್ಟನಂತಕದೂತಸಂತತಿಗೆ ೩೬

ಅರಿಭಟನ ಬೊಬ್ಬೆಗಳ ಮೊಳಗಿನೊ
ಳರುಣಜಲವರುಷದಲಿ ರಿಪುಗಳ
ಕೊರಳ ಬನದಲಿ ಕುಣಿದುವೀತನ ಖಡ್ಗವನಕೇಕಿ
ಸುರಿವ ಖಂಡದ ರಕುತಧಾರೆಗೆ
ತರತರದಿ ಬಾಯ್ದೆಗೆದು ಶಾಕಿನಿ
ಯರ ಸಮೂಹವು ಬಳಿಯಲೈದಿತು ಪಾರ್ಥನಂದನನ ೩೭

ಕರುಳ ಹೂಗೊಂಚಲಿನ ಮೂಳೆಯ
ಬಿರಿಮುಗುಳ ನವಖಂಡದಿಂಡೆಯ
ಕರತಳದ ತಳಿರೆಲೆಯ ಕಡಿದೋಳುಗಳ ಕೊಂಬುಗಳ
ಬೆರಳ ಕಳಿಕೆಯ ತಲೆಯ ಫಲ ಬಂ
ಧುರದ ಘೂಕಧ್ವಾಂಕ್ಷ ನವಮಧು
ಕರದ ರಣವನವೆಸೆದುದೀತನ ಖಡ್ಗಚೈತ್ರದಲಿ ೩೮

ವೈರಿವೀರಪ್ರತತಿಗಮರೀ
ನಾರಿಯರಿಗೆ ವಿವಾಹವನು ವಿ
ಸ್ತಾರಿಸುವ ಸಮಯದೊಳಗಾಂತ ಸಿತಾಕ್ಷತಾವಳಿಯ
ತಾರಕಿಗಳೆಸೆದಭ್ರವೆನೆ ರಿಪು
ವಾರಣದ ಮಸ್ತಕದ ಮುತ್ತುಗ
ಳೋರಣಿಸಲೊಪ್ಪಿದುದು ಖಡ್ಗ ಸುರೇಂದ್ರಸುತನಸುತ ೩೯

ಶಾಕಿನಿಯರೋಕುಳಿಯ ಧಾರೆಯ
ಜೀಕೊಳವೆಯೋ ಜವನ ಜಳಜಂ
ತ್ರಾಕರುಷಣವೊ ರಕುತಲತೆಗಳ ಕುಡಿಯ ಕೊನರುಗಳೊ
ನೂಕಿ ಕೊಯ್ಗೊರಳುಗಳ ಮುಂಡದ
ಮೂಕಿನಲಿ ನೆಗೆದೊಗುವ ನೆತ್ತರು
ನಾಕವನು ನಾದಿದುದೆನಲು ಸವಱಿದನು ಪರಬಲವ ೪೦

ಅಟ್ಟಿ ಹೊಯ್ದನು ದಂತಿಗಳ ಹುಡಿ
ಗುಟ್ಟಿದನು ವಾಜಿಗಳ ತೇರಿನ
ಥಟ್ಟುಗಳ ಸೀಳಿದನು ಮಿಗೆ ಕಾಲಾಳನಸಿಯಱಿದ
ಕೆಟ್ಟು ಬಿಟ್ಟೋಡಿದುದು ಭಟನಱಿ
ಯಟ್ಟಿದನು ರಣದೊಳಗೆ ರಾಯ ಘ
ರಟ್ಟ ಪಾರ್ಥನತನಯ ಕೊಂದನು ಖಡ್ಗ ಮನದಣಿಯೆ ೪೧

ಹಸುಳೆಯನಬಹುದೇ ಮಹಾದೇ
ವಸಮಬಲ ಬಾಲಕನೆನುತ ಚಾ
ಳಿಸಿತು ಪಡೆಯಲ್ಲಲ್ಲಿ ತಲ್ಲಣಿಸಿದರು ನಾಯಕರು
ಮುಸಡ ತಿರುಹುತ ಮಕುಟವರ್ಧನ
ರುಸುರಲಮ್ಮದೆ ಸಿಕ್ಕಿ ಭೂಪನ
ನುಸುಳುಗಂಡಿಯ ನೋಡುತಿರ್ದರು ಕೂಡೆ ತಮತಮಗೆ ೪೨

ತುಡುಕಲಮ್ಮುವರಿಲ್ಲ ಬಲದಲಿ
ಮಿಡುಕಲಮ್ಮುವರಿಲ್ಲ ರಕುತದ
ಕಡಲೊಳಗೆ ಬೆಂಡೆದ್ದು ನೆಗೆದುದು ಕೋಟಿ ಪಾಯದಳ
ಸಿಡಿಲು ಜಂಗಮವಾಯ್ತೊ ಪ್ರಳಯದ
ಮೃಡನು ಬಾಲಕನಾದನೋ ಕೊಲೆ
ಗಡಿಕನಹುದೋ ಕಂದ ಎಂದನು ಕೌರವರ ರಾಯ ೪೩

ಧನು ಮುಱಿದ ಬಳಿಕಿಮ್ಮಡಿಸಿತೀ
ತನ ಪರಾಕ್ರಮುವೆನುತ ಸೇನಾ
ವನಧಿ ಜಱಿದುದು ಭಟರು ಹರಿದರು ಬಿಟ್ಟ ಮಂಡೆಯಲಿ
ಜನಪತಿಯ ಕಟ್ಟಳವಿಯಲಿ ರವಿ
ತನುಜನಡ್ಡೈಸಿದನು ಫಡ ಹೋ
ಗೆನುತ ನಾರಾಚದಲಿ ಮುಸುಕಿದನರ್ಜುನಾತ್ಮಜನ ೪೪

ಶರಮುಯವು ಸರ್ವಾಂಗವಿನ್ನೀ
ಸರಳು ನೆಡಲಿಂಬಿಲ್ಲ ಮೈಗಳೊ
ಳಱಿಯನದನಭಿಮನ್ಯು ಕರ್ಣನ ಮೇಲುವಾಯಿದನು
ತರಹರಿಸಿ ಕೆಲಸಿಡಿದು ರಿಪುಭಟ
ನುರವನುದರವನೆಡಬಲನ ಕಿ
ಬ್ಬರಿಯನೆಚ್ಚನು ಕರ್ಣ ನೂಱೈವತ್ತು ಬಾಣದಲಿ ೪೫

ಸರಳು ನೆಡಲುಬ್ಬೆದ್ದು ಬೊಬ್ಬಿಱಿ
ದುಳವಣಿಸಿ ಬರೆ ದಿವ್ಯಶರದಲಿ
ಕರವೆರಡ ಹರಿಯೆಚ್ಚಡಾಗಳೆ ಕೆಡೆದವವನಿಯಲಿ
ಇರದೆ ಗಹಗಹಿಸಿದನು ಕೇಳೆಲೆ
ಮುರುಳೆ ಸೂತಜ ಕೈಮುಱಿಯೆ ಸಂ
ಗರದ ಸಿರಿ ಹಿಂಗುವಳೆ ತನ್ನನೆನುತ್ತ ಗರ್ಜಿಸಿದ ೪೬

ಸುರಿವ ರಕುತದ ಸರಿಯ ಸೆಱಗಿನೊ
ಳೊರಸಿ ರಥದಚ್ಚುಗಳನೊದೆದನು
ತಿರುಹಿ ಗಾಲಿಯ ತೆಗೆದು ಮುಂಗೈಗೊಂಡು ನಡೆ ನಡೆದು
ಅರಿಬಲವನಿಡೆ ಮುಗ್ಗಿ ಕೆಡೆದುದು
ತುರಗವಜಿಗಿಜಿಯಾದುದಿಭತತಿ
ಯುರುಳಿದವು ಹೊರಳಿದವು ಹೂಣೆಗರಟ್ಟೆ ಸಮರದಲಿ ೪೭

ಹರಿಯ ಚಕ್ರದ ಸತ್ವವೀತನ
ಧುರದೊಳಾಯ್ತೆನೆ ರಥದ ಚಕ್ರದೊ
ಳರಿಬಲವನಿಡೆ ಮುಗ್ಗಿ ಕೆಡೆದುದು ಬಹಳ ತಳತಂತ್ರ
ಬಿರುದರಾನುವರಿಲ್ಲ ಷಡುರಥ
ರುರುವಣೆಯು ಹಿಂದಾಯ್ತು ರಾಯರ
ಗುರುವ ಕಂಡವರಿಲ್ಲೆನುತ ಕುರುರಾಯ ಚಿಂತಿಸಿದ ೪೮

ಮನದ ಖತಿ ಹೊಗರೇಱಿ ದುಶ್ಶಾ
ಸನನ ಮಗನಿದಿರಾಗಿ ಖಡುಗದ
ಮೊನೆಯ ಚೂಱಿಸಿ ದಂಡವಲಗೆಯ ತೊಡೆಯೊಳೊದಱಿಸುತ
ತನಗೆ ಮೃತ್ಯುವ ಕಱೆವವೋಲ
ರ್ಜುನಕುಮಾರನ ಕಱೆದು ಹಳಚಿದ
ನನಿಮಿಷಾವಳಿ ಪೂತು ಪಾಯ್ಕನೆ ಹೆಣಗಿದರು ಭಟರು ೪೯

ಗಾಲಿ ತೀಱಿದವೆಂದು ಬಂದನೆ
ಕಾಳೆಗಕೆ ತಪ್ಪೇನೆನುತ ಕರ
ವಾಳನಾತನ ಬಗೆಯದೊಳಹೊಕ್ಕೈಱಗಿದನು ಶಿರವ
ಮೇಲುವಲಗೆಯುಲಣೆದು ಹಾಯ್ದನು
ಬಾಲಕನ ಘಾಯವನು ನಸುನಗು
ತೇಳಿಸುತ ದಂಡೆಯಲಿ ಕಳೆದನು ಶಿವಿದನವನುರವ ೫೦

ಕರಹಳಿಗೆ ಧಡಧಡಿಸಿ ತಿಱ್ರನೆ
ತಿರುಗಿ ಬೀಳುತ ಧೈರ್ಯದಲಿ ಹೊಡ
ಕಱಿಸಿ ಹೊಱಬಿನೊಳೆದ್ದು ಹೊಯ್ದನು ಪಾರ್ಥನಂದನನ
ಅಱಿಕೃಪಾಣದ ಘಾಯವನು ತರ
ಹರಿಸಲಱಿಯದೆ ಬೀಳುತಹಿತನ
ನೆಱಗಿದನು ಬಳಿಕವನಿಗೊಱಗಿದರಾ ಕುಮಾರಕರು ೫೧

ಕಾಳುಕಿಚ್ಚೆದ್ದಡವಿಯನು ಕುಡಿ
ನಾಲಗೆಯೊಳಳವಡಿಸಿ ದಳ್ಳುರಿ
ಜ್ವಾಲೆ ತಗ್ಗಿದವೋಲು ಗಗನದ ಮುಗಿಲ ಮೋಹರವ
ಧಾಳಿಯಲಿಯಱೆಯಟ್ಟಿ ಸುಂಟರು
ಗಾಳಿಯುರವಣೆ ನಿಂದವೊಲು ಸುರ
ಪಾಲತನಯನತನಯನಸ್ತಮಿಸಿದನು ರಣದೊಳಗೆ ೫೨

ತೋಳ ತಲೆಗಿಂಬಿನಲಿ ಕೈದುಗ
ಳೋಳಿಗಳ ಹಾಸಿನಲಿ ತನ್ನಯ
ಕಾಲ ದೆಸೆಯಲಿ ಕೆಡೆದ ಕೌರವಸುತರು ನೂರ್ವರಲಿ
ಬಾಲಕನು ಬಳಲಿದನು ಸಮರದ
ಲೀಲೆಯಲಿ ಕುಣಿಕುಣಿದು ಬಸವಳಿ
ದಾಳುಗಳ ದೇವನು ಮಹಾಹವದೊಳಗೆ ಪವಡಿಸಿದ ೫೩

ಬಿಗಿದ ಹುಬ್ಬಿನ ಬಿಟ್ಟ ಕಂಗಳ
ಹೊಗರು ಮೋರೆಯ ಹಿಣಿಲ ಮಂಡೆಯ
ಜಗಿಯ ರಕುತದ ಜೋಱನೊಡಲಿನ ತುಱುಗಿದಂಬುಗಳ
ಹೆಗಲ ಕೊಯ್ಲಿನ ತಗ್ಗಿನಲಿ ಸೈ
ನೆಗೆದ ರೋಮದ ವಿಕ್ರಮಾಗ್ನಿಯ
ತಗಹು ಬಿಡದಭಿಮನ್ಯು ಮೆಱೆದನು ಶಸ್ತ್ರಶಯನದಲಿ ೫೪

ಸಾವ ಹರಯವೆ ಎನುತ ಗಗನದ
ದೇವತತಿ ಮಱುಗಿತ್ತು ಶಕ್ರನ
ಸಾವಿರಾಲಿಯೊಳೊಱತೆ ಮಸಗಿತು ಪೌತ್ರಶೋಕದಲಿ
ತಾವು ಷಡುರಥರೊಬ್ಬ ಹಸುಳೆಯ
ಹೇವವಿಲ್ಲದೆ ಕೊಂದರೋ ಸುಡ
ಲಾವ ವೀರರು ಕೌರವಾದಿಗಳೆಂದುದಮರಗಣ ೫೫

ಮಗುವು ವೇಷವ ಧರಸಿ ದೂರದ
ಲಗಲಿಹೋಗಲು ತನ್ನ ಚಿತ್ತಕೆ
ಧಗೆಯು ಡಾವರವಾಯ್ತು ತನಗೊಳಗಾಯ್ತು ಪರಿತಾಪ
ಮಗನ ಮರಣದಲೆಂತು ಜೀವವ
ಬಗೆವಳಕಟ ಸುಭದ್ರೆಯೆನುತವೆ
ದೃಗುಜಲವ ಬೆರಳಿಂದ ಮಿಡಿದರು ಗೌರಿದೇವಿಯರು ೫೬

ಹಲವು ಗಜಗಳು ಸಿಂಹಶಿಶುವನು
ಗೆಲಿದ ಪರಿಯಂತಾಯ್ತು ಹಾವಿನ
ಬಳಗ ಗರುಡನ ಮಱಿಯ ಮುಱಿದವೊಲಾಯಿತಕಟೆನುತ
ಆಳಲಿದುದು ಸುರಕಟಕವವನಿಯೊ
ಳಿಳಿದರಪ್ಸರಗಣಿಕೆಯರು ಕೋ
ಮಳನ ತಂದರು ವಾಸವನ ಸಿಂಹಾಸನದ ಹೊರೆಗೆ ೫೭

ಧುರದ ಪ್ರಳಯಕೃತಾಂತನನು ಪರಿ
ಹರಿಸಿದೆವು ಮೃತ್ಯುವಿನ ಪಾಶದ
ಕೊರಳ ಬಿಳಿಚಿದೆವೆನುತ ಕೌರವಬಲದ ನಾಯಕರು
ಶಿರವ ತಡಹುತ ತಮ್ಮ ಶಿಬಿರಕೆ
ತಿರುಗಿದರು ಬಾಲಕನನೀಕ್ಷಿಸ
ಲರಿದು ತನಗೆಂಬಂತೆ ರವಿ ಜಾಱಿದನು ಪಶ್ಚಿಮಕೆ ೫೮



## ೫. ಶೋಕವಿಮ್ಮಡಿಸಿತ್ತು

ತೆಗೆದುದರಿಪರಿವಾರ ಕಹಳಾ
ದಿಗಳ ಸನ್ನೆಯಲುಭಯಬಲ ಕಾ
ಳೆಗವನುಳಿದುದು ಬಂದು ಹೊಕ್ಕರು ತಮ್ಮ ಪಾಳಯವ
ಮಗನು ರಣದಲಿ ಮಡಿದ ಹದ ಬೀ
ಡುಗಳೊಳಾದುದು ವಾರ್ತೆ ದೂತರು
ದುಗುಡಭರದಲಿ ಬಂದು ಹೊಕ್ಕರು ರಾಜಮಂದಿರವ ೧

ಅವನಿಪಾಲ ಕುಮಾರಕಂಠೀ
ರವನು ರಣದಲಿ ಬೀದಿವರಿದು
ತ್ಸವದಲಹಿತರನಿಱಿದು ಕೌರವ ರಾಯನಂದನರ
ಜವನ ನಗರಿಗೆ ಕಳುಹಿ ತಾ ವಾ
ಸವನ ಸಿಂಹಾಸನವನಡರುವ
ತವಕದಲಿ ಜಾಱಿದನೆನಲು ಶಿವ ಎನುತ ಬಸವಳಿದ ೨

ಕುಲಿಶಹತಿಯಲಿ ಕುಲಶಿಲೋಚ್ಚಯ
ವಿಳೆಗೆ ಕೆಡೆವಂದದಲಿ ನಿಜಸುತ
ನಳಿದ ವಾರ್ತಾವಚನದುಪಟಳಕವನಿಪಾಲಕನು
ಮಲಗಿದನು ಮೈಮಱೆದು ಮಹಿಮಂ
ಡಳಿಕರೊಳು ಗುಜುಗುಜಿನೊಳಿರೆ ಕಳ
ವಳಿಕೆ ಮೊಳೆತುದು ಕಟಕದಲಿ ದುಮ್ಮಾನಮಯವಾಯ್ತು ೩

ಹೊಳಲ ಗಜಬಜವಡಗಿತರಮನೆ
ಯೊಳಗೆ ಪಸರಿಸಿತತುಳಶೋಕದ
ಜಲಧಿ ಭೂಪಾಲಕನ ಸ್ಥೈರಣೆಗಾಯ್ತು ಮಹಸನವಮಿ
ಒಳಗುರಿವ ಹಸಿಮರನ ತುದಿಯಲಿ
ಜಲವೊಗುವವೊಲು ಹೃದಯ ಶಿಖಿಯುಱೆ
ತಳಿತು ಲೋಚನವಾರಿ ತುಳುಕಿತು ಪವನಜಾದಿಗಳ ೪

ಬಂದು ಫಲುಗುಣನೆನ್ನ ಮೋಹದ
ಕಂದನಾವೆಡೆಯೆಂದಡಾನೇ
ನೆಂದು ಮಾಱುತ್ತರವ ಕೊಡುವೆನು ವೈರಿನಾಯಕರು
ಕೊಂದರೆಂಬೆನೊ ಮೇಣು ನಾನೇ
ಕೊಂದೆನೆಂಬೆನೊ ಶಿವ ಮಹಾದೇ
ವೆಂದು ಪುತ್ರಸ್ನೇಹಸೌರಂಭದಲಿ ಹಲುಬಿದನು ೫

ಅರಮನೆಯ ಗಜಬಜವ ಕೇಳಿದು
ದೊರೆಯೊಳಾವವನಳಿದನಕಟೆಂ
ದರಸಿಯರು ಬೆಸಗೊಳಲು ದ್ರೌಪದಿಗಱುಹಿದರು ಹದನ
ಉರಿಯ ಡಾವರವೆಳೆಯ ಬಾಳೆಯ
ಬೆರಸುವಂತಿರೆ ರಾಯಕುವರನ
ಮರಣವಾರ್ತೆಯನಾ ಸುಭದ್ರಾದೇವಿ ಕೇಳಿದಳು ೬

ತೆಳುವಸುಱ ಬಿಱುವೊಯ್ಲ ಮುರಜದ
ಬಳಲ ಮುಡಿಯರಳುಗಳ ಮುತ್ತಿಗೆ
ಯಳಿರವದ ಭಾರಣೆಯ ಹಾಹಾರವದ ಕಾಯದಲಿ
ಲಲನೆ ಬರೆ ಚೆಲುವಾಯ್ತು ಧರ್ಮಜ
ನಳಲು ಮಿಗೆ ಕೊಂಡಿರಲು ನಾಟ್ಯದ
ಕಳನ ಗೆಲದಿರಳೆನಲು ಬಂದಳು ದ್ರೌಪದಾದೇವಿ ೭

ಅಳಲಶಿಖಿಯಲಿ ಬಾಡಿದಾನನ
ಜಲರುಹದ ಕಡುವೇದನೆಯ ಕಳ
ಕಳದ ಹಾಹಾರವದ ರೌದ್ರೆ ಸುಭದ್ರೆ ನಡೆತಂದು
ನೆಲಕೆ ಧೊಪ್ಪನೆ ಕೆಡೆದು ಸಭೆಯಲಿ
ಹಲುಬಿದಳು ಕೊಳುಗುಳಕೆ ಕಂದನ
ಕಳುಹಿದವರಿಗೆ ಸಂದುದೇ ಪರಿಣಾಮವೆಂದೆನುತ ೮

ಎಲೆ ಯುದಿಷ್ಠಿರದೇವ ಸಾಲದೆ
ಕೆಲನ ಮೆಚ್ಚಿಸುವಳಲು ಲೋಚನ
ಜಲವ ತೊಡೆಯ್ಯೆ ಭೀಮ ಬಲ್ಲೆನು ನಿಮ್ಮ ನೆಸಹುಗಳ
ಅಳಲದಿರಿ ಸಹದೇವ ನಕುಳರು
ನಿಲಿಸಿರ್ರೈ ನಿಮ್ಮಿಷ್ಟಸಿದ್ಧಿಯ
ಬೆಳಸು ಫಲವಾಯ್ತೇಕೆ ನೋವಿನ್ನೆಂದಳಿಂದುಮುಖಿ ೯

ಮಗನು ಪಂಚದ್ರೌಪದೇಯರ
ಬಗೆಯನೆನ್ನವನಿರಲು ರಾಜ್ಯವ
ಹೊಗಿಸಲನುವಿಲ್ಲೆಂದು ಕಂದನ ರಣಕೆ ನೂಕಿದಿರಿ
ಬಗೆಯೊಲವು ಫಲವಾಯ್ತಲಾ ಕಾ
ಳೆಗವ ಗೆಲಿದೈವರುಕುಮಾರರು
ಹೊಗಿಸಿರ್ರೈ ಗಜಪುರವನೆಂದು ಸುಭದ್ರೆ ಹಲುಬಿದಳು ೧೦

ಶೋಕವಿಮ್ಮಡಿಸಿತ್ತು ಚಿತ್ತ
ವ್ಯಾಕುಳತೆಯಾ ಸತಿಯ ನುಡಿಗಳ
ನೇಕ ಸಾಣೆಯ ಸರಳು ಮುಱಿದವು ನೃಪನ ಹೃದಯದಲಿ
ಆ ಕುಮಾರವಿಯೋಗವಹ್ನಿಗೆ
ಯಾಕೆಯಳಲು ಸಮೀರಣಾಯ್ತು ದಿ
ವೌಕಸರ ಸಮ್ಮೇಳವೇ ಪುರುಷಾರ್ಥ ತನಗೆಂದ ೧೧

ಎಲೆ ವೃಕೋದರ ನಕುಳ ಸಾತ್ಯಕಿ
ನಿಲಿಸಿರ್ಕೆ ತಂಗಿಯನು ತನ್ನಯ
ಕೊಲೆಗೆ ಮಗನಳಿವೊಂದು ಸಾಲದೆ ತನ್ನ ನುಡಿಯೇಕೆ
ನಳಿನನಾಭನ ಕರುಣ ದೊಱತೆಯು
ಕಳಿದರಾರೇಗುವರು ಶಿವ ಶಿವ
ನೆಲನೊಳೆನ್ನವೊಲಾರು ಪಾಪಿಗಳೆಂದು ಬಿಸುಸುಯ್ದ ೧೨

ಧರಣಿಪನ ಶೋಕಾತಿಶಯವನು
ವರಸಮಾಧಿಯೊಳಱಿದು ಮುನಿಪತಿ
ಕರುಣವಲಿ ಕಡುನೊಂದು ಸಕಲಜಗಕ್ಕನುಗ್ರಹವ
ಕರುಣಿಸುವವೊಲು ಕರುಣಿತನವನು
ಮೆಱೆಯಲೋಸುಗವಿರದೆ ಗಗನೇ
ಚರದ ಗತಿಯಲಿ ಬಂದನೈ ದ್ವೈಪಾಯನವ್ರತಿಪ ೧೩

ಅಡಸಿದಾಪತ್ತಿನಲಿ ಧೈರ್ಯವ
ಹಿಡಿವುದೇ ಸುಪ್ರಾರ್ಥಿ ಸಾಕಿ
ನ್ನೊಡಲು ಕರಗಿದೊಡೇಳಲಱಿವನೆ ಹಿಂಗಿದಭಿಮನ್ಯು
ಒಡನೆ ಬಂದವು ಬಿಡವು ಭವದಲಿ
ತೊಡಕಿ ಸುಕೃತವು ದುಷ್ಕೃತಂಗಳು
ಕಡೆಗೆ ತಿಳಿವಿನೊಳಲ್ಲದಿಹಪರಸೌಖ್ಯವಿಲ್ಲೆಂದ ೧೪

ಎಲ್ಲರೋಪಾದಿಯ ಕುಮಾರಕ
ನಲ್ಲ ಕಾಣಿರೆ ವೀರ ವಿತರಣ
ದಲ್ಲಿ ಛಲದಲಿ ಶೀಲದಲಿ ನಾನಾಗುಣಂಗಳಲಿ
ಇಲ್ಲ ಸುಕುಮಾರಂಗೆ ಸರಿ ಮಗ
ನಿಲ್ಲದೇಗುವೆನಕಟ ವಚನದ
ಸೆಲ್ಲಹದಲಿಱಿಯದಿರೆನುತ ಹಲುಬಿದನು ಭೂಪಾಲ ೧೫

ಹರನೊಡನೆ ಹೊಯ್ದಾಡಿದಗ್ಗದ
ನರನು ತಂದೆ ಸಮಸ್ತಭುವನೇ
ಶ್ವರನಲಾ ಮುರವೈರಿ ಮಾವನು ನಿನ್ನ ತನಯನಿಗೆ
ಧುರದೊಳೀ ಹದನಾಯ್ತು ಮಿಕ್ಕಿನ
ನೊರಜುಗಳ ಪಾಡೇನು ಕಾಲನು
ಹರಿಹರಬ್ರಹ್ಮಾದಿಗಳ ಕೈಕೊಂಬನಲ್ಲೆಂದ ೧೬

ದೇಹ ತಾನಭಿಮನ್ಯುವೋ ದಿಟ
ದೇಹಿ ತಾನಭಿಮನ್ಯುವೋ ಜಡ
ದೇಹ ತಾನಭಿಮನ್ಯುವಲ್ಲದು ಕೆಟ್ಟರೇನಾಯ್ತು
ದೇಹವೆಂಬುದನಿತ್ಯ ನಿನ್ನವ
ರಾಹವದೊಳಳಿದವರ ಬಿಡು ಸಂ
ದೇಹವನಹಮ್ಮಮತೆಗಳ ಬೀಳ್ಕೊಟ್ಟು ನೋಡೆಂದ ೧೭

ಉರಗ ನರ ದಿವಿಜಾದಿಗಳಿಗಿದು
ಪರಿಹರಿಸಲಳವಲ್ಲ ದೈವದ
ಪರುಠವಣೆ ಮುನ್ನಾದಿಯಲಿ ನಿರ್ಮಿಸಿತು ಮೃತ್ಯುವನು
ಅರಸನಾಗಲಿ ಧನಿಕನಾಗಲಿ
ಹಿರಿಯನಾಗಲಿ ಬಡವನಾಗಲಿ
ಮರಣ ಜನಿಸಿದ ಬಳಿಕ ತಪ್ಪದು ಮಗನೆ ಕೇಳೆಂದ ೧೮

## ೬. ಹರನ ಕೋಪವ ಕೇಣಿಗೊಂಡನು

ಕೇಳು ಜನಮೇಜಯಧರಿತ್ರೀ
ಪಾಲ ಸಮಸಪ್ತಕರ ಬಲ ನಿಜ
ಪಾಳಯಕೆ ತಿರುಗಿದುದು ತೀರಿತು ತರಣಿಯಾಟೋಪ
ಕಾಳೆಗವ ತೆಗೆಸಿದರು ಕೌರವ
ರೇಳು ಫಲುಗುಣ ಎನುತ ಲಕ್ಷ್ಮೀ
ಲೋಲ ವಾಘೆಯ ಮರಳಿ ಕೊಂಡನು ಹಯವ ಬೋಳೈಸಿ ೧

ಅಳಿಯನಳಿವನು ಹೇಳಬಾರದು
ತಿಳಿಯಲಿದನಿನ್ನೆನುತ ಚಿಂತಿಸಿ
ನಳಿನಲೋಚನ ಬರುತ ಕಂಡನು ವರಸರೋವರವ
ಇಳಿದು ರಥವನು ರಣಪರಿಶ್ರಮ
ಗಳೆವೆನೆನುತವೆ ಪಾರ್ಥ ಸಹಿತಾ
ಕೊಳನ ಹೊಕ್ಕನು ಜಗದುದರಲೀಲಾವತಾರಕನು ೨

ಧುರದ ಕೋಳಾಹಳದ ಧಗೆ ಡಾ
ವರಿಸಿ ಬಳಲಿ ಧನಂಜಯನು ವರ
ಸರಸಿಯಲಿ ಮುಳುಗಿರಲು ನಸುನಗುತೊಂದುಪಾಯದಲಿ
ನರನೋಳ್ನುಡುವೆನು ಘನಸಂ
ಗರದೊಳಡಗಿದ ರಾಜಕುವರನ
ಮರಣವಾರ್ತೆಯನೆಂದು ಮನದಲಿ ನೆನೆದನಸುರಾರಿ ೩

ಎಲೆ ಸುರೇಂದ್ರಕುಮಾರ ಕೇಳ್ ನಿ
ನ್ನೊಲುಮೆಯಣುಗನು ರಣದೊಳಗೆ ರಿಪು
ಬಲವ ಕೋಳಾಹಳಿಸಿ ಕೌರವಸುತರು ನೂರ್ವರನು
ತಲೆಯನರಿದನು ಬಳಿಕ ತಾ ಸುರ
ಲಲನೆಯರ ಚೆಲುವಿಂಗೆ ಸೋತನು
ಕಳಿದನೆನುತವೆ ನುಡಿದು ಹರಿ ಮುಳುಗಿದನು ಜಲದೊಳಗೆ ೪

ಎನಲು ಧಿಮ್ಮನೆ ಕೊಳದೊಳಗೆ ನಿಂ
ದನು ಮುಕುಂದನು ಸುರಪಸುತನಾ
ನನವ ನೋಡುತದೇನದೇನೆನೆ ಬಿಕ್ಕಿ ಬಿರಿದಳುತ
ತನಯನಳಿಯದೆ ಮಾಣ ಗಗನ
ಧ್ವನಿಯೊಳಾದುದು ವಾರ್ತೆ ಚಿತ್ತಕೆ
ಮೊನೆಯ ಸರಳೆನೆ ಮರುಳೆ ಬಾ ಎಂದೇಱಿದನು ರಥವ ೫



ಹರಿ ರಥವನಿಳಿದಂತೆ ಪಾರ್ಥನ
ಭರದ ಕೋಪವ ಕಂಡು ನಿಜಮಂ
ದಿರಕೆ ಮೆಲ್ಲನೆ ಜುಣುಗಿದನು ಯಾದವರ ಗಡಣದಲಿ
ವರಧನುವ ಶಸ್ತ್ರಾಸ್ತ್ರಕವಚವ
ನಿರಿಸಿ ಕೈಗೊಡುವವರ ಕನಲು
ತ್ತರಮನೆಯ ಹೊಕ್ಕನು ಯುದಿಷ್ಠಿರರಾಯನೋಲಗವ ೬



ಧರಣಿಪನ ನಿಱಿಗೆಯಲಿ ಕಂದನ
ಮರಣವನು ನಿಶ್ಚಯಿಸಿ ಪ್ರಳಯದ
ಹರನ ಕೋಪವ ಕೇಣಿಗೊಂಡನು ತನ್ನ ಚಿತ್ತದಲಿ
ಸುರಿವ ನಯನಾಂಬುಗಳ ಜಲನಿಧಿ
ಗುರವಣಿಸಿದನೊ ವಡಬನೆನೆ ಮುರ
ಹರನ ಮೈದುನನೊಯ್ಯನೈದಿದನವನಿಪಾಲಕನ ೭





ಉಕ್ಕಿ ಶೋಕದ ಕಡಲು ಪಾರ್ಥನ
ಮುಕ್ಕುಳಿಸಿತಾ ಶೋಕಶರಧಿಯ
ಹೊಕ್ಕು ಬೆಳೆದುದು ಕೋಪಶಿಖಿ ವಡಬಾಗ್ನಿಯಂದದಲಿ
ಮಕ್ಕಳೊಳು ನೋಡಿದನು ಕಂದನ
ನಿಕ್ಕಿದಿರಲಾ ಲೇಸು ಮಾಡಿದಿ
ರಿಕ್ಕಿತುಳಿದಾಳುಗಳೆನುತ ಭೂಪತಿಗೆ ಪೊಡವಂಟ ೮

ತಲೆಯ ಮುಸುಕಿನ ಕಂಗಳೊಜತೆಯ
ಜಲದ ದುಗುಡದ ಮುಖದ ಜನಪತಿ
ಫಲುಗುಣನನೆತ್ತಿದನು ತಲೆಗುತ್ತಿದನು ಭೀತಿಯಲಿ
ಮಲಗಿದನು ವರ ಭೀಮ ಸಭೆ ತ
ಲ್ಲಳಿಸಿತರ್ಜುನ ಬಂದನೆನೆ ಬಸ
ವಳಿದು ಬಂದು ಸುಭದ್ರೆ ಪತಿಯಂಘ್ರಿಯಲಿ ಹೊರಳಿದಳು ೯

ಪತಿಯುಳಿದ ಸತಿಯಿರವು ನಾಯಕ
ರತುನವಿಲ್ಲದ ಪದಕ ದೈವ
ಸ್ತುತಿಗಳಿಲ್ಲದ ಕಾವ್ಯರಚನಾ ಭಾವದಂದದಲಿ
ಕೃತಕವಲ್ಲಭಿಮನ್ಯುವಿಲ್ಲದೆ
ಕ್ಷಿತಿಪ ನಿನ್ನಾಸ್ಥಾನ ಮೆಱೆಯದು
ಸುತನ ಸುದ್ದಿಯದೇನು ಮಱುಗಿಸಬೇಡ ಹೇಳೆಂದ ೧೦

ಬರಲು ಬಹನಿದಿರಾಗಿ ತನ್ನಯ
ವರರಥವ ಬಂದೇಱುವನು ನಿಜ
ಕರತಳದಿ ಮೈದಡವಿ ಘಾಯವ ನೋಡಿ ಮಱುಗುವನು
ತರುಣನಿದಿರ್ಕೈತರಲು ತನ್ನಯ
ಧುರದ ಬಳಲಿಕೆ ಹಿಂಗುವುದು ಹೇ
ಳರಸ ಕಂದನ ಸುಳಿವ ಕಾಣೆನು ಕರಸಿ ತೋಱೆಂದ ೧೧





ಮಗನ ಮಣಿರಥವೆಲ್ಲಿ ಹೊಡಿದ
ವಿಗಡತೇಜಿಗಳೆಲ್ಲಿ ಮಣಿವೆಳ
ಗುಗಳ ಛತ್ರವದೆಲ್ಲಿ ಚಾಮರವೆಲ್ಲಿ ಧನುವೆಲ್ಲಿ
ಹಗೆಯರಲಿ ಹತವಾದನೇ ಹಾ
ಸುಗುಣನಿಲ್ಲಿಗೆ ಬಾರನೇ ತಾ
ನೊಗವ ಕಾಣದೆ ಹೋದನೇ ಎನಗೇನುಗತಿಯೆಂದ ೧೨

ಕಂದ ಬಾರೋ ಎನ್ನ ಮನಕಾ
ನಂದ ಬಾರೋ ಬಾಲಕರ ಪೂ
ರ್ಣೇಂದು ಬಾರೋ ರಿಪುಕುಲಾಂತಕನಿಪುಣ ಮುಖದೋಱೋ
ತಂದೆ ನಿನಗೆನ್ನಲ್ಲಿ ಋಣಸಂ
ಬಂಧ ಸವೆದುದೆ ಶಿವ ಶಿವಾ ತಾ
ಮಂದಭಾಗ್ಯಂಗಣುಗ ದಕ್ಕುವನಲ್ಲ ಎನಗೆಂದ ೧೩

ಅಸಮಪದ್ಮವ್ಯೂಹವನು ಭೇ
ದಿಸುವನಾವವನೆನಲು ಕೇಳಿದು
ಶಿಶುತನದಲಾಹವಕೆ ನಡೆದನು ನಾವು ಬೇಡೆನಲು
ಹೊಸಮದದ ವನದಂತಿ ಕದಳಿಯ
ಕುಸುರಿದಱಿದಂದದಲಿ ಘನಪೌ
ರುಷವ ಮಾಡಿದನೆಂದನವನೀಪಾಲನನುಜಂಗೆ ೧೪

ಅರಿನೃಪಾಲರ ನೂಱುಮಕ್ಕಳ
ಶಿರವನರಿದನು ಷಡುರಥರ ಮಿಗೆ
ಪರಿಭವಿಸಿದನು ರಿಪುಬಲವನಡಹಾಯ್ದಾನೆವರಿವರಿದು
ಧುರಕೆ ಹೆಱತೆಗೆದೆಮ್ಮ ನಾಲ್ವರ
ಸರಿದುಹೋದಭಿಮಾನವನು ಕಾ
ಯ್ದುರವಣಿಸಿ ಮಗನೇಱಿದನು ವಾಸವನ ಗದ್ದುಗೆಯ ೧೫

ಈ ನಕುಳನೀ ಭೀಮನೀ ಪಾಂ
ಚಾಲನೀ ಸಹದೇವನೀ ಭೂ
ಪಾಲನೀ ಸಾತ್ಯಕಿ ಯುಧಾಮನ್ಯೂತ್ತಮೌಜಸರು
ಕಾಳೆಗದೊಳಂಗೈಲಸಮ್ಮದೆ
ಬಾಲಕನ ನೂಕಿದಿರಲಾ ನಿ
ಮ್ಮಾಳುತನವನು ತೋಱದಿರಲಾ ತನ್ನ ಮೇಲೆಂದ ೧೬

ವೀರರಿನಿಬರು ನೆರೆದು ರಿಪುಪರಿ
ವಾರವನು ಹೊಗಲಂಜಿ ಹೊಱಗಣ
ಮಾರಿ ಹೊಱಹೊಱಗೆಂಬವೊಲು ನಂದನನ ನೂಕಿದಿರಿ
ಆರ ನಂಬಲುಬಹುದು ನಿಮಿಷವು
ದೂರ ತಾ ತೊಲಗಿದರೆ ತನ್ನ ಕು
ಮಾರನಿದ್ದರೆ ಹಱವ ಕಂಡಿರಿ ಹೊಲ್ಲಹೇನೆಂದ ೧೭

ಕೆಡೆನುಡಿದು ಫಲವೇನು ಸಾಕಿ
ನ್ನೊಡೆಯರಿಲ್ಲದ ವಸ್ತುವಾದೆನು
ಕಡೆಗೆ ಧರ್ಮಜ ಹೇಳು ಕೊಂದವನಾರು ನಂದನನ
ಕಡುವಗೆಯದಾರವರ ಬಲದಲಿ
ನುಡಿ ನಿದಾನವನವನ ಜೀವಕೆ
ಹಿಡಿ ಮಹೀಪತಿ ಸಂಚಕಾರವನೆಂದನಾ ಪಾರ್ಥ ೧೮

ಅರಸು ಮಕ್ಕಳ ಕೊಂದನೈನೂ
ರ್ವರನು ಮೂಱಕ್ಷೋಣಿ ಸೈನ್ಯವ
ನೊರಸಿದನು ಮಸೆಗಾಣಿಸಿದನಗ್ಗದ ಮಹಾರಥರ
ಧುರವ ಗೆಲಿದನು ಪಡಿತಳಿಸಿ ನಾ
ವುರವಣಿಸಲಡಹಾಯ್ದು ನಮ್ಮನು
ಹರನ ವರವುಂಟೆಂದು ತಡೆದನು ಸಿಂಧುಭೂಪಾಲ ೧೯

ವಿರಥನಾದನು ಭೀಮ ನಕುಳನು
ತಿರುಗಿದನು ಸಹದೇವ ಕೊರಳಿನ
ಹರಣದಲಿ ಹಿಮ್ಮೆಟ್ಟಿದನು ದ್ರುಪದಾದಿನಾಯಕರು
ಧುರದೊಳೋಸರಿಸಿದರು ಸೈಂಧವ
ಹರನ ವರದಲಿ ನಮ್ಮ ಗೆಲಿದನು
ಮರಣವನು ಕಂದಂಗೆ ತಂದವನವನು ಕೇಳೆಂದ ೨೦

ಇನ್ನು ಹೇಳುವುದೇನೆನುತ ಕೈ
ಸನ್ನೆಯಲಿ ಮಾತಾಡಿ ಭೂಪತಿ
ಬೆನ್ನ ತೆತ್ತನು ಭೀಮಸೇನನ ವಿಪುಲವಕ್ಷದಲಿ
ತನ್ನ ಮಱೆದನು ನಯನಧಾರಾ
ಭಿನ್ನ ಚಾರುಕಪೋಲನಿರೆ ಸಂ
ಪನ್ನ ಶೋಕಾಗ್ನಿಯಲಿ ಬೆಂದುದು ಸಕಲಜನ ಹೃದಯ ೨೧

ಮುಚ್ಚಿದನು ಕಂಗಳನು ಧೈರ್ಯದ
ಕೆಚ್ಚನೆದೆ ಕರಗಿತ್ತು ಶೋಕದ
ಕಿಚ್ಚು ಕೊಂಡುದು ಮನವನಖಿಳೇಂದ್ರಿಯದ ಸುಳಿವಡಗೆ
ಎಚ್ಚಱಡಗಿತು ನೆಲಕೆ ಕೈಗಳ
ಬಿಚ್ಚಿ ಬಿದ್ದನು ಪುತ್ರವಿರಹದ
ಹೆಚ್ಚಿಗೆಯ ತಾಪವನು ಹೆಸರಿಡಲಱಿಯೆನರ್ಜುನನ ೨೨

ಘನವಿಕರ್ಮದ ವಿಲಗದಲಿ ನಿಜ
ತನುಜಶೋಕದ ತಗಹಿನೊಳಗ
ರ್ಜುನನ ಧೈರ್ಯದರಿದ್ರನಾದನದೇನ ಹೇಳುವೆನು
ಮನ ಬಳಲಿ ಮೈ ಮಱೆದು ತಾಪದಿ
ಕನಸ ಕಂಡನುರ್ಝುಡಿಕೆ ಮಿಗೆ ಝೊ
ಮ್ಮನ ಸುಷುಪ್ತಿಯೊಳಿದ್ದು ನಿಮಿಷದೊಳೆದ್ದು ಕಣ್ದೆಱೆದ ೨೩

ಅಳಲ ಮುಕ್ಕುಳಿಸಿದನು ಮೋಹದ
ಬೆಳವಿಗೆಯ ಗವಸಣಿಸಿದನು ಕಳ
ಕಳಿಕೆ ಹಿಂಗಿದುದಶ್ರುಜಲವನು ಕಂಗಳಲಿ ಕುಡಿದು
ಪ್ರಳಯರುದ್ರನ ಕೋಪಶಿಖಿ ವೆ
ಗ್ಗಳಿಸಿತೆನೆ ಕಂಗಳಲಿ ಕಿಡಿಗಳು
ತುಳುಕಿದವು ರೌದ್ರಾನುಭಾವದ ರಸದ ಭಂಗಿಯಲಿ ೨೪

ಹೇಳು ಹೇಳಿನ್ನೇನು ಮಾಱಿಯ
ಮೇಳವಾಡಿದನೇ ಜಯದ್ರಥ
ನಾಳತನುವನು ಬವರದಲಿ ತನ್ನೊಡನೆ ತೋಱಿದನೆ
ನಾಳೆ ಬೈಗಿಂದೊಳಗೆ ರಿಪುವನು
ಸೀಳುವೆನು ಸೀಳದಿರೆ ಧರ್ಮಜ
ಕೇಳು ಭಾಷೆಯನೆಂದು ಮಿಗೆ ಗರ್ಜಿಸಿದನಾ ಪಾರ್ಥ ೨೫

ಹರನ ದುರ್ಗದಲಿರಲಿ ಮೇಣಾ
ಹರಿಯ ಕಡಲೊಳಗಿರಲಿ ಬ್ರಹ್ಮನ
ಕರಕಮಂಡಲದೊಳಗೆ ಹುದುಗಲಿ ರವಿಯ ಮಱೆಹೊಗಲಿ
ಉರಗಭುವನದೊಳಿರಲಿ ಮೇಣ್ ಸಾ
ಗರವ ಮುಳುಗಲಿ ನಾಳೆ ಪಡುವಣ
ತರಣಿ ತೊಲಗದ ಮುನ್ನ ಕೊಲುವೆನು ವೈರಿಸೈಂಧವನ ೨೬

# ನಿನ್ನ ತನುಭವನ್ ಈತ

ನೆಟ್ಟನೆ ಹಯಂ ಪೋಗಿ ವಹಿಲದಿಂ ಪೊಕ್ಕುದಾ
ಪಟ್ಟಣವನದರೊಡನೆ ನಡೆತಂದು ಪಾಳೆಯಂ
ಬಿಟ್ಟುದು ಪುರೋದ್ಯಾನವೀಥಿಗಳೊಳರ್ಜುನಂ ನಗರಮಂ ನೋಡಿ ನಗುತೆ
ಕಟ್ಟಿಸಕದಿಂದೆ ಕಂಗೊಳಿಸುತಿದೆ ಪೊಳಲಿದಂ
ಮುಟ್ಟಿ ಪಾಲಿಪ ವೀರನಾರವಂ ಕುದುರೆಯಂ
ಕಟ್ಟುವನೆ ಪೇಳೆಂದು ಹಂಸಧ್ವಜಕ್ಷಿತಿಪನಂ ಕೇಳ್ದೊಡಿಂತೆಂದನು ೧

ನೀನರಿದುದಿಲ್ಲಲಾ ಪಾರ್ಥ ಮಣಿಪುರಮೆಂಬ
ರೀನಗರಮಂ ಬಭ್ರುವಾಹನಂ ಪ್ರಖ್ಯಾತ
ಭೂನಾಥನಿಲ್ಲಿಗರಸವನಿಪರೊಳಗ್ಗಳಿಯನಿವನ ಸಿದ್ಧಾಯಕಾಗಿ
ಏನೆಂಬೆನೊಂದು ಸಾಸಿರ ಬಂಡಿ ಕನಕವಂ
ನ್ಯೂನಮಿಲ್ಲದೆ ತೆತ್ತು ಬಹೆವು ನಾವೆಲ್ಲರುಂ
ಹೀನವಾದೊಡೆ ದಂಡಿಸುವನೆಂಬ ಭೀತಿಯಿಂ ಪ್ರತಿದಿನದೊಳಂ ತಪ್ಪದೆ ೨

ಈತಂಗೆ ಸಚಿವಂ ಸುಬುದ್ಧಿಯೆಂಬವನೋರ್ವ
ನಾತನೇ ಪಾಲಿಸುವನಿವನ ಭೂತಳಮಂ ನಿ
ಜಾತಿಶಯ ಧರ್ಮದಿಂದೆಳ್ಳನಿತು ದೋಷಮಿಲ್ಲದೆ ಸಾವಧಾನನಾಗಿ
ನೀತಿಪಥಮಂ ಬಿಡದೆ ವಿವಿಧವರ್ಣಾಶ್ರಮದ
ಜಾತಿಭೇದವನರಿದು ಸಂತತಂ ಪ್ರಜೆಗಳಂ
ಪ್ರೀತಿಯಿಂ ಪೊರೆದು ಪರಿಜನಕೆ ಪದುಳಿಗನಾಗಿ ಭೂಪನಂ ಪೋಷಿಸುವನು ೩

ಒಂದು ಕೊಡಕೆಯ ಕಪ್ಪಿನಿಂದೆಸೆವ ತೇಜಿಗಳ್
ಕುಂದೇಂದುಧವಳಾಂಗದಾನೆಗಳ್ ಮಣಿಮಯದ
ಪೊಂದೇರ್ಗಳಿನಿತೆಂದರಿಯುರಿವನ ಕರಣಿಕರ್ ಮಿಕ್ಕ ರಥ ಕರಿ ಘಟಿಗಳ
ಮಂದಿ ಕುದುರೆಯ ಪವಣನರಿವರಾರ್ ಭೂಪಾಲ
ವೃಂದದೊಳ್ ಪಡಿಯುಂಟೆ ಬಭ್ರುವಾಹಂಗೆ ಕಡು
ಪೊಂದಿದತಿಶಯವೀರನೀ ತುರಗಮಂ ಕಟ್ಟಿದಿರ್ದಪನೆ ಪೇಳೆಂದನು ೪

ಭೂಲೋಲ ಕೇಳ್ ಮರಾಳಧ್ವಜನ ಮಾತನಿಂ
ತಾಲಿಸುವ ಪಾರ್ಥನ ಕಿರೀಟಾಗ್ರದೊಳ್ ಬಂದು
ಕಾಲೂರಿ ನಿಂದಿರ್ದುದೊಂದು ಪರ್ದೆನೆಂಬೆನುತ್ಪಾತವದ್ಭುತವನು
ನೀಲಧ್ವಜಾದಿ ನೃಪರೆಲ್ಲರುಂ ತಮತಮಗೆ
ಮೇಲಣಪಜಯಸೂಚನೆಯಲಾ ನರಂಗಕಟ
ಕಾಲಗತಿಯೆಂತಿಹುದೊ ಶಿವಶಿವಾಯೆನುತೆ ಮನವಳುಕಿ ಚಿಂತಿಸುತಿರ್ದರು ೫

ಇತ್ತಲೀ ತೆರದೊಳಿರುತಿರಲತ್ತಲಾ ಪುರದೊ
ಳುತ್ತಮಹಯಾಗಮವನೊಡನೆ ಬಂದಿಹ ನೃಪರ
ವೃತ್ತಾಂತಮಂ ಬಭ್ರುವಾಹನಂ ಕೇಳ್ದು ಭಟರಂ ಕಳುಹಿ ತೊಳತೊಳಗುವ
ಮುತ್ತುಗಳ ಮಾಲೆಯಿಂ ಕನಕದಾಭರಣದಿಂ
ಚಿತ್ತರದ ಗಂಧಮಾಲ್ಯಾಕ್ಷತೆಗಳಿಂ ಪೂಜೆ
ವೆತ್ತೆಸೆವ ತುರಗಮಂ ತರಿಸಿ ಕಟ್ಟಿದನೋದಿಕೊಂಡು ಪಟ್ಟದ ಲಿಪಿಯನು ೬

ಏನೆಂಬೆನರ್ಜುನನ ಕಟಕಮಿರ್ದುದು ಮಹಾಂ
ಭೋನಿಧಿಯ ಮಸಕದಿಂ ಪೊಳಲು ಪೊರವಳಯದು
ದ್ಯಾನವೀಧಿಗಳೊಳತ್ತಲ್ ಬಭ್ರುವಾಹನಂ ನಗರದೊಳೆಣಿಕೆಗೊಳ್ಳದೆ
ತಾನಮಲ ಸಂಧ್ಯಾವಿಧಿಗಳನಾಚರಿಸಿ ಸು
ಮ್ಮಾನದಿಂ ಪತ್ತುಸಾಸಿರ ಕಂಭದೆಸಕದಾ
ಸ್ಥಾನಮಂಟಪಕೆ ಬಂದೋಲಗಂಗೊಟ್ಟನತಿಸಂಭ್ರಮದೊಳಂದಿನಿರುಳು ೭

ಬಳಿಕಾ ಮಹಾಸ್ಥಾನದೊಳ್ ಬಭ್ರುವಾಹನಂ
ನಲವಿಂದೆ ಕುಳ್ಳಿರ್ದು ನಗುತೆ ಪರಮಂಡಲ
ಸ್ಥಳದಿಂದೆ ಬಂದ ರಾಯರ ಯಜ್ಞತುರಗಮಂ ಕಟ್ಟಿಕೊಂಡೆವು ಮನೆಯೊಳು
ಕೊಳುಗುಳಕೆ ಮಿಡುಕುವರ್ ನಾಳೆ ನಾವಿನ್ನು ಹಿಂ
ದುಳಿಯಬಾರದು ಕದನಕನುವಾಗಿರಲಿ ಪಾಯ
ದಳಮೆಂದು ನುಡಿದಂ ಸುಬುದ್ಧಿ ಮೊದಲಾಗಿಹ ಶಿರಃಪ್ರಧಾನಿಗಳ ಕೂಡೆ ೮

ಇಂತಿಲ್ಲಿ ನಡೆದಖಿಲವೃತ್ತಾಂತಮಂ ಕೇಳ್ದ
ಳಂತಃಪುರದೊಳರ್ಜುನನ ಗುಣಾವಳಿಗಳಂ
ಸಂತತಂ ನೆನೆದು ಚಿಂತಿಪ ಬಭ್ರುವಾಹನನ ನಿಜಮಾತೆ ಚಿತ್ರಾಂಗದೆ
ಸಂತೋಷಮಂ ತಾಳ್ದು ತನಯನೋಲಗಕೆ ಭರ
ದಿಂ ತಳರ್ದಿದಿರೇಳ್ವ ಕುವರನಂ ತೆಗೆದಪ್ಪಿ
ಕುಂತೀಸುತನ ವಾಜಿಯಂ ಕಟ್ಟಿದೈ ಮಗನೆ ಲೇಸುಮಾಡಿದೆ ಯೆಂದಳು ೯

ಕ್ಷುದ್ರಬುದ್ಧಿಯನೆಲ್ಲಿ ಕಲಿತೆ ನೀನೀಪರಿ ಗು
ರುದ್ರೋಹಕೆಂತು ತೊಡರ್ದುದು ನಿನ್ನ ಮನಮಕಟ
ಮುದ್ರಮಣನಾಗಮಂ ನಿನಗೆ ವಿರಹಿತಮಾದುದಾತನುದರದೊಳೆ ಜನಿಸಿ
ಉದ್ರೇಕದಿಂದೆ ಕಟ್ಟಿದೆಯಲಾ ತುರಗಮಂ
ಭದ್ರಮಾದುದು ರಾಜಕಾರ್ಯಮಿಂದಮೃತಕೆ ಸ
ಮುದ್ರಮಂ ಮಥಿಸೆ ವಿಷಮುದಿಸಿದವೊಲಾಯ್ತು ನಿನ್ನುದ್ಭವಂ ತನಗೆಂದಳು ೧೦

ಮಾತೆಯ ನುಡಿಗೆ ನಡುನಡುಗಿ ಬಭ್ರುವಾಹನಂ
ಭೀತಿಯಿಂದಡಿಗೆರಗಿ ಕ್ಷತ್ರಿಯರ ಪಂತದಿಂ
ದಾತನ ತುರಗಮಂ ಕಟ್ಟಿದೆಂ ನಿಮ್ಮ ಚಿತ್ತಕೆ ಬಾರದಿರ್ದ ಬಳಿಕ
ನೀತಿಯಾದಪುದೆ ತನಗಿನ್ನು ನಿಮ್ಮಡಿಗೆ ಸಂ
ಪ್ರೀತಿಯೆಂತಾದಪುದದಂ ಬೆಸಸಿದೊಡೆ ಮಾಳ್ಪೆ
ನೇತಕಾತುರಮೆಂದು ಕೈಮುಗಿದೊಡಾಗ ಚಿತ್ರಾಂಗದೆ ನಿರೂಪಿಸಿದಳು ೧೧

ಮಗನೆ ಕೇಳೆನ್ನನೆಂದರ್ಜುನಂ ಬಿಟ್ಟು ನಿಜ
ನಗರಿಗೈದಿದನಂದು ಮೊದಲಾಗಿ ತಾನವನ
ನಗಲ್ದ ಸಂತಾಪದಿಂ ತಪಿಸುತಿರ್ದೆಂ ಪುಣ್ಯವಶದಿಂದೆ ಬಂದನಿಂದು
ಬಗೆಯದಿರ್ದಪೆನೆಂತು ಕಾಂತನಂ ನೀ ನಿಂದು
ಮೊಗದೋರಿ ನಿನ್ನ ಸರ್ವಸ್ವಮುಂ ತಾತನಂ
ಘ್ರಿಗೆ ಸಮರ್ಪಿಸಿದೊಡಾಂ ಮಾಡಿದ ತಪೋನಿಷ್ಠೆ ಸಫಲವಾದಪುದೆಂದಳು ೧೨

ಕಂದ ನೀನಿಂದು ನಿನ್ನಖಿಳ ಪ್ರಕೃತಿಗಳಂ
ತಂದೆಗೊಪ್ಪಿಸಿ ಯುಧಿಷ್ಠಿರನೃಪನ ವೈರಿಗಳ
ಮುಂದೆ ತೋರಿಸು ನಿನ್ನ ಶೌರ್ಯಮಂ ತನುಧನಪ್ರಾಣಂಗಳವರದಾಗೆ
ನಿಂದೆಗೊಳಗಾಗದಿರ್ ದುಷ್ಟಸಂತಾನದಂ
ತೊಂದಿಸದಿರಗತಿಯಂ ತನ್ನ ಪಾತಿವ್ರತ್ಯ
ಕೆಂದು ಸೂನುಗೆ ಬುದ್ಧಿಗಲಿಸಿ ಪಾರ್ಥನ ಬರವಿಗುಬ್ಬಿದಳ್ ಚಿತ್ರಾಂಗದೆ ೧೩

ಜನನಿಯಂ ಮನೆಗೆ ಮನ್ನಿಸಿ ಕಳುಹಿ ಬಭ್ರುವಾ
ಹನನಾ ಸುಬುದ್ಧಿಯಂ ನೋಡಿ ಪಿತನಂ ಕಾಣ್ಬು
ದನುಚಿತವೊ ಮೇಣುಚಿತಮಾದಪುದೊ ಪೇಳಿದರ ನಿಶ್ಚಯವನೀಗಳೆನಲು
ನಿನಗೆಣಿಕೆ ಬೇಡ ಮೊದಲರಿಯದಾದೆವು ಧರ್ಮ
ತನಯಂಗೆ ನಿಮ್ಮಯ್ಯನನುಜನಾತನ ರಕ್ಷೆ
ವಿನುತಹಯಕದನಿನ್ನು ಕಲಿತನದೆ ಕಟ್ಟುವುದು ನೀತಿಪಥಮಲ್ಲೆಂದನು ೧೪

ಇನ್ನು ಕಟ್ಟಿಸು ಗುಡಿಗಳಂ ಬೇಗ ಪಟ್ಟಣಕೆ
ನಿನ್ನಖಿಳ ರಾಜ್ಯಪದವಿಯನೊಪ್ಪಿಸಯ್ಯಂಗೆ
ಮನ್ನೆಯರ್ ಚಾತುರಂಗದ ಸೇನೆ ನಾಗರಿಕಜನಮಲಂಕರಿಸಿಕೊಳಲಿ
ಕನ್ನೆಯರ್ ಲಾಜ ದಧಿ ದೂರ್ವಾಕ್ಷತೆಗಳಿಂದೆ
ಕನ್ನಡಿ ಕಳಸವಿಡಿದು ಬರಲಿ ಸಂದರ್ಶನಕೆ
ಸನ್ನುತ ಸುವಸ್ತುಗಳನೆಲ್ಲಮಂ ತೆಗೆಸು ತಡವೇಕೆಂದನಾ ಸುಬುದ್ಧಿ ೧೫

ವರಸುಬುದ್ಧಿಯ ಬುದ್ಧಿಯಂ ಕೇಳ್ದನಾ ಪಾರ್ಥಿ
ದೊರೆದೊರೆಗಳೆಲ್ಲರಂ ಕಳುಪಿದಂ ಮನೆಗಳ್ಗೆ
ಪುರದೊಳಗೆ ಡಂಗುರಂಬೊಯ್ಸಿದಂ ಕೋಶದ ಸುವಸ್ತುಗಳನು
ತರಿಸಿದಂ ಕನಕಪೂರಿತ ಶಕಟನಿಕರಮಂ
ತರುಣಿ ಗೋಮಹಿಷಿ ಮದ ಕುಂಜರ ಕುಲಾಶ್ವಮಣಿ
ವಿರಚಿತ ರಥಂಗಳಂ ರಜತ ಕಾಂಚನ ಮಯದ ಪಲವು ಕೊಪ್ಪರಿಗೆಗಳನು ೧೬

ನವ್ಯಚಿತ್ರಾಂಬರಾಭರಣಂಗಳಂ ವಿವಿಧ
ದಿವ್ಯರತ್ನಂಗಳಂ ಪರಿಪರಿಯ ಪರಿಮಳ
ದ್ರವ್ಯಂಗಳಂ ಕನಕ ಖಟ್ವ ನುತಹಂಸತೂಲದ ಮೃದುಲ ತಲ್ಪಗಳನು
ಸುವ್ಯಜನ ಚಾಮರ ಸಿತಾತಪತ್ರಂಗಳಂ
ಸವ್ಯಸಾಚಿಯ ಕಾಣಿಕೆಗೆ ತರುವುದೆಂದು ಕ
ರ್ತವ್ಯದಿಂ ಜೋಡಿಸಿದನಾ ಬಭ್ರುವಾಹನಂದಿರುಳಖಿಳ ವಸ್ತುಗಳನು ೧೭

ಆದಿತ್ಯನುದಯದೊಳ್ ಫಲುಗುಣನ ಸೂನು ಸಂ
ಧ್ಯಾದಿಗಳನಾಚರಿಸಿ ವಸ್ತುಗಳನೈದೆ ಸಂ
ಪಾದಿಸಿ ಕಿರೀಟಿಯಂ ಕಾಣಲನುವಾದರ್ಜುನನಿತ್ತ ಪಾಳೆಯದೊಳು
ಸಾಧಿಸಿ ಸಕಲ ನಿತ್ಯಕೃತ್ಯಮಂ ಮಾಡಿ ಮಧು
ಸೂದನನ ಚರಣಮಂ ನೆನೆದು ವೃಷಕೇತು ಮೊದ
ಲಾದ ವೀರರ್ಕಳಂ ಕರೆಸಿದಂ ಹಯಮಂ ಬಿಡಿಸಿಕೊಂಬ ತವಕದಿಂದೆ ೧೮

ಅನುಸಾಲ್ವಕನ ಸೇನೆ ಯಾದವರ ಚತುರಂಗ
ಮಿನಸುತನ ಸೂನುವಿನ ಮೋಹರಂ ಯೌವನಾ
ಶ್ವನ ಪಾಯದಳ ಮತುಲಹಂಸಕೇತುವಿನ ಪಡೆ ನೀಲಧ್ವಜನ ವಾಹಿನಿ
ದನುಜಾರಿ ನಂದನನ ನೇಮದಿಂ ಸಂಗ್ರಾಮ
ಕನುವಾಗಿ ಪೊರಮಟ್ಟುದಾಗ ಸನ್ನಾಹದಿಂ
ಘನವಾದ್ಯ ರಭಸದಿಂದರ್ಜುನಂ ಬಂದು ನಿಂದಂ ಮುಂದೆ ದೊರೆಗಳೊಡನೆ ೧೯

ಆ ಸಮಯದೊಳ್ ಬಭ್ರುವಾಹನಂ ಪೊರಮಟ್ಟ
ನಾ ಸುಬುದ್ಧಿ ಪ್ರಮುಖ ಮಂತ್ರಿಗಳ ಗಡಣದಿಂ
ದಾಸಕಲ ವಸ್ತುಸಹಿತಾ ಕುದುರೆಯಂ ಕೊಂಡು ನಿಖಿಳ ಚತುರಂಗದೊಡನೆ
ಭಾಸುರದ ಕಳಸ ಕನ್ನಡಿವಿಡಿದು ನಡೆತಹ ವಿ
ಲಾಸಿನಿಯರೊಗ್ಗಿನಿಂ ಸಂದಣಿಯ ಪುರಜನದ
ಭೂಸುರಸ್ತೋಮದಿಂ ಗುಡಿತೋರಣಾವಳಿಯ ಸಿಂಗರದ ಪದಪಿನಿಂದೆ ೨೦

ಎಲ್ಲಿ ಕೌಂತೇಯನಿರ್ದಪನಲ್ಲಿಗಾಗಿ ನಿಂ
ದಲ್ಲಿನಿಲ್ಲದೆ ಸಂಭ್ರಮದೊಳೆ ನಡೆತಂದು ವೈ
ಭುಲ್ಲವಿಸೆ ಹರ್ಷದಿಂ ಪಾರ್ಥನಂ ಕಂಡು ನಿಜಮೌಳಿಯಂ ತೆಗೆದು ನರನ
ಮೆಲ್ಲಡಿಗನರ್ಘ್ಯ ರತ್ನಂಗಳಂ ಸುರಿದು ಕರ
ಪಲ್ಲವದ್ವಿತಯಮಂ ಮುಗಿದು ಭಯಭಕ್ತಿಯಿಂ
ಚೆಲ್ಲಿವನೊಡಲನಿಳೆಯೊಳಾ ಬಭ್ರುವಾಹನಂ ನೀಡಿ ಸಾಷ್ಟಾಂಗದಿಂದೆ ೨೧

ಅರಸ ಕೇಳಾ ಬಭ್ರುವಾಹನನೊಡನೆ ಬಂದ
ಪರಿವಾರಮಾ ಪುರಜನಂಗಳಾ ಕಾಮಿನಿಯ
ರರಳ ಮಳೆ ಮುಕ್ತಾಫಲಂಗಳಂ ಸುರಿದರರ್ಜುನನ ಮಸ್ತಕದಮೇಲೆ
ವರಸುಬುದ್ಧಿ ಪ್ರಮುಖ ಮಂತ್ರಿಗಳ್ ಬಂದರೊ
ತ್ತರಿಸಿ ಕಾಣಿಕೆಗೊಂಡು ಬಳಿಕ ವಿಸ್ಮಿತನಾಗಿ
ನರನೆಲೆ ನೃಪಾಲ ನೀನಾರೆನಲ್ಕವನೆದ್ದು ಕೈಮುಗಿಯುತಿಂತೆಂದನು ೨೨

ತಾತ ಚಿತ್ತೈಸು ನಿನ್ನಾತ್ಮಜಂ ತಾನೆನ್ನ
ಮಾತೆ ಚಿತ್ರಾಂಗದೆ ಸಲಹಿದವಳುಲೂಪಿ ಸಂ
ಪ್ರೀತಿಯಿಂದಿವರಾದರರಸಿಯರ್ ನೀನಂದು ತೀರ್ಥಯಾತ್ರೆಗೆ ಬಂದಿರೆ
ಜಾತನಾದೆಂ ಬಭ್ರುವಾಹನಂ ತಾನೀಗ
ಳೀತುರಗಮಂ ಪಿಡಿದು ಕಟ್ಟಿ ತಪ್ಪಿದೆ ಗುಣಾ
ತೀತಮಂ ಕ್ಷಮಿಸೆಂದು ಮಗುಳೆರಗಿದಂ ಪಾರ್ಥನಡಿಗವಂ ಭೀತಿಯಿಂದೆ ೨೩

ಮುಗುಳೆ ಮುಗುಳಡಿಗೆರಗಿ ಭಯಭರಿತಭಕ್ತಿಯಿಂ
ಮಿಗೆ ಬೇಡಿಕೊಳುತೆ ಕಾಲ್ವಿಡಿದಿರ್ಪ ತನಯನಂ
ಮೊಗನೋಡಿ ಮಾತಾಡಿಸದೆ ಬೆರಗುವಡೆದಂತೆ ಕೆತ್ತುಕೊಂಡಿಹ ವಿಜಯನ
ಬಗೆಯನೀಕ್ಷಿಸಿ ಹಂಸಕೇತು ನೀಲಧ್ವಜಾ
ದಿಗಳೆಲ್ಲರುಂ ಸವಿಸ್ಮಯರಾಗಿ ಚಿಂತಿಸಿ ಕ
ರಗಿದರತಿ ಕರುಣರಸಭಾವದಿಂದೇನೆಂಬೆನಪಕೃತದ ಸೂಚಕವನು ೨೪

ಪ್ರದ್ಯುಮ್ನ ಹಂಸಧ್ವಜಾದಿಗಳ್ ಬಳಿಕಿದೇ
ನುದ್ಯೋಗಮೆಲೆ ಪಾರ್ಥ ನಿನ್ನ ತನುಭವನೀತ
ನುದ್ಯತ್ಪರಾಕ್ರಮಿ ಮಹಾವೈಭವಶ್ಲಾಘ್ಯನಭಿಮಾನಿ ಮಾನ್ಯನಿಳೆಗೆ
ಖದ್ಯೋತಸನ್ನಿಭಂ ನಿನ್ನ ಹೋಲುವೆಯ ನಿರ
ವದ್ಯರೂಪಂ ಪದಾವನತನಾಗಿರ್ದಪಂ
ಹೃದ್ಯನಿವನಂ ಪರಿಗ್ರಹಿಸಿ ಮನ್ನಿಸದೇಕೆ ಸುಮ್ಮನಿರ್ದಪೆಯೆಂದರು ೨೫

ಭೂಪ ಕೇಳಿವರಿಂತೆನಲ್ಕೆ ಬಳಿಕರ್ಜುನಂ
ಕೋಪದಿಂದವನ ನಿಟ್ಟಿಸುತೆಂದನಾಗ ತಲೆ
ಪೋಪುದಕೆ ತನ್ನ ಕಾಲ್ವೊಣೆಯೆಂಬ ಧರೆಯ ನಾಣ್ನುಡಿ ತಪ್ಪದಾದುದೆನಲು
ಆ ಪುತ್ರನಹ ಬಭ್ರುವಾಹನನನೊದೆದೆಲವೊ
ನೀ ಪಂದೆ ಲೋಕದೊಳ್ ತನಗೆ ಸಂಭವಿಸಿದವ
ನೀಪರಿಯೊಳಂಜುವನೆ ಮೊದಲಶ್ವನುಂ ಕಟ್ಟಿ ಮತ್ತೆ ಬಿಡುವನೆ ಕಾದದೆ ೨೬

ಚಿತ್ರಾಂಗದೆಗೆ ವೈಶ್ಯನಿಂದೆ ಸಂಭವಿಸಿರ್ದ
ಪುತ್ರನಲ್ಲದೆ ತನಗೆ ಜನಸಿದೊಡೆ ಬಿಡುವೆಯಾ
ಕ್ಷತ್ರಿಯರ ಮತಮಂ ಸುಭದ್ರೆಗೆನ್ನಿಂ ಜನಿಸಿದಭಿಮನ್ಯು ತಾನೋರ್ವನೆ
ಶತ್ರುಗಳ ವಿಗಡಚಕ್ರವ್ಯೂಹದಲ್ಲಿಗೆ ಧ
ರಿತ್ರೀಶನಂ ಮೀರಿ ನಡೆದು ಸಂಗ್ರಾಮದೊಳ
ಮಿತ್ರಭಟರಂ ಗೆಲ್ದಳಿದನಾತನಲ್ಲದಾತ್ಮಜರುಂಟೆ ತನಗೆಂದನು ೨೭

ಜಂಬುಕಂ ಜನಿಸುವುದೆ ಸಿಂಗದುದರದೊಳಕಟ
ಹೆಂಬೇಡಿ ನೀನೆಲವೊ ಕುಲಗೇಡಿ ತನ್ನ ಬಸಿ
ರಿಂ ಬಂದವನೆ ಖೂಳ ಕುದುರೆಯುಂ ಕಾದದೇತಕೆ ತಂದೆ ಪಂದೆ ನಿನಗೆ
ಡೊಂಬಿನ ಚತುರ್ಬಲವಿದೇಕೆ ಭೂಪಾಲರಾ
ಡಂಬರದ ಛತ್ರಚಮರಂಗಳೇತಕೆ ಬಯಲ
ಡಂಬಕದ ಕೈಮುಗಳಿವೇಕೆ ಸುಡು ಬಿಡು ಜೀವದಾಸೆಯಂ ಪೋಗೆಂದನು ೨೮

ಅಹಹ! ನರ್ತಕಿಯಲಾ ಗಂಧರ್ವನಾಯಕನ
ದುಹಿತೃವಲ್ಲಾ ನಿನ್ನ ಮಾತೆ ಚಿತ್ರಾಂಗದೆಯೆ
ವಿಹಿತಮಲ್ಲಿದು ನಿನಗೆ ಭೂಮಿಪರ ವೇಷಮಂ ತಳೆದ ನಾಟಕದ ರಚನೆ
ಬಹಳ ಪೌರುಷಮಾದುದಿಂದು ಹಯಮಂ ತಡೆದ
ರಹಣೆ ರಾಯರಮುಂದೆ ಹೋಗೆಂದು ದುಷ್ಕೃತಿಯ
ಕುಹಕದಿಂ ಬೈದು ಭಂಗಿಸಿ ಜರೆದನಾತ್ಮಜನನರ್ಜುನಂ ಕೋಪದಿಂದೆ ೨೯

ಬಿರುನುಡಿಗಳಿಂ ತನ್ನ ಮೊಗನೋಡದರ್ಜುನಂ
ಜರಿದೊಡಾತನ ಬಗೆಯನಾ ಸುಬುದ್ಧಿಗೆ ತೋರು
ತುರೆ ಕನಲ್ದಿರದೆದ್ದು ಪಳಿದೆಲಾ ಮಾತೆಯಂ ನನಗೆ ಸೀವರಿಸಿದೆಯಲಾ
ಅರಿಯಬಹುದಿನ್ನು ಕೇಳ್ ನಿನ್ನ ತಲೆಗೆಡಹದೊಡೆ
ಕುರುಹಿಟ್ಟು ನೀನಾಡಿದಿನಿತೆಲ್ಲಮುಂ ದಿಟಂ
ಮರೆಯದಿರ್ ಸಾಕೆಂದು ತಿರುಗಿದಂ ಬಭ್ರುವಾಹನನಂದು ಕುದುರೆಸಹಿತ ೩೦

ಕೇಳೆಲೆ ನೃಪಾಲಕುಲತಿಲಕ ಮುಂದದ್ಭುತ ಕ
ಥಾಳಾಪಮಂ ಬಳಿಕ ಪೂಡಿದುದು ಕರ್ಕಶದ
ಕಾಳಗಂ ಸವ್ಯಸಾಚಿಗೆ ಬಭ್ರುವಾಹನನ ಕೂಡೆ ಮಹದಾಹವದೊಳು
ಹೇಳಲೇನಂದು ಸುರಪಂಗೆ ಪಾರ್ಥನೊಳಾದ
ಕೋಳಾಹಳದ ಕದನದಂತೆ ಮುನ್ನಧ್ವರದ
ಬೇಳಂಬದಿಂದೆ ರಾಮಂಗೆ ಕುಶಲವರೊಡನೆ ಬಂದ ಸಂಗ್ರಾಮದಂತೆ ೩೧



# ಬಾಣಮಂ ಬಂಜೆಗೈದವರೆ

ಕಡೆಯ ಮಾತೇನಖಿಳ ಸೇನೆಯಂ ಭರತನಂ
ಕೆಡಹಿ ಕುಶನಲ್ಲಿಂದೆ ತುರಗಮಿರ್ದೆಡೆಗೆ ಬಂ
ದೊಡಹುಟ್ಟಿದಂ ವೆರಸಿ ನಿಲ್ವಿನಂ ದೂತರೀತೆರನಂ ರಘೂದ್ವಹಂಗೆ
ಕಡುವೇಗದಿಂದೆ ಪೋಗಿ ಬಿನ್ನೈಸೆ ಕೇಳ್ದಳ
ಲ್ವಿಡಿದು ಪರಿತಾಪದಿಂದುರೆನೊಂದು ವಿಸ್ಮಯಂ
ಬಡುತೆದ್ದು ಸುಗ್ರೀವ ವರವಿಭೀಷಣರೆಡಬಲದೊಳೈದೆ ಪೊರಮಟ್ಟನು ೧

ಬಂದಂ ರಥಾರೂಢನಾಗಿ ರಣರಂಗದೊಳ್
ನಿಂದು ಮೈಮರೆದೊರಗಿದನುಜರಂ ಮಡಿದ ಬಲ
ವೃಂದಮಂ ಕುದುರೆಯಂ ಕಟ್ಟಿಕೊಂಡಿದಿರಾಗಿ ಬಿಲ್ವಿಡಿದು ಕಾಳೆಗಕ್ಕೆ
ನಿಂದಿರ್ದ ಯಮಳರಂ ಕಂಡು ಬೆರಗಾಗಿ ರಘು
ನಂದನಂ ವಿನಯದಿಂ ತಾನೆ ಬೆಸಗೊಂಡನಿಂ
ತೆಂದು ಘನ ಗಂಭೀರವಾಕ್ಯದಿಂದತಿಮನೋಹರಮಾದ ಸುಸ್ವರದೊಳು ೨

ಎಲೆ ಪಸುಳೆಗಳಿರ ನಿಮಗೀ ಧನುರ್ವೇದಮಂ
ಕಲಿಸಿದವನಾವನಾವುದು ನಿವಾಸಸ್ಥಳಂ
ಸಲಹಿದವನಾವನಾವಂ ತಂದೆ ತಾಯಾವಳಶ್ವಮಂ ಕಟ್ಟುವಿನಿತು
ಚಲಮಿದೇತಕೆ ನಮ್ಮ ಸೇನೆಯಂ ಜಯಿಸುವೀ
ಬಲಮೇತರಿಂದಾದುದೆಂದು ನಯದಿಂದೆ ರಘು
ಕುಲ ಲಲಾಮಂ ಕೇಳ್ದೊಡಾಕುಶಂ ನಸುನಗುತೆ ಮಾರುತ್ತರಂಗೊಟ್ಟನು ೩

ರಾಜೇಂದ್ರ ನೀನೆಮ್ಮೊಳಾಹವಕೆ ಬಿಲ್ಗೊಂಡು
ವಾಜಿಯಂ ಬಿಡಿಸಿಕೊಳ್ಳಲ್ಲದೊಡೆ ಮರುಳಪ್ರ
ಯೋಜಕವ ಮಾತಿದೇತಕೆ ನಿರುಪಮ ಕ್ಷಾತ್ರಪೌರುಷವನುಳಿದು ಬರಿದೆ
ಸೋಜಿಗದೊಳೆಮ್ಮ ಜನನಸ್ಥಿತಿಗಳಂ ಕೇಳ್ದೊ
ಡೀಜಗಂ ಮೆಚ್ಚದೆಚ್ಚಾಡಿ ನೋಡೆನುತೆ ಕುಶ
ನಾಜಲಜ ಮಿತ್ರಕುಲ ತಿಲಕನಂ ಬಗೆಯದೆ ನುಡಿದೊಡಾತನಿಂತೆಂದನು ೪

ಶಿಶುಗಳಾಗಿಹ ನಿಮ್ಮೊಳೆನಗೆ ಕಾಳಗವೆ ಪರ
ವಶರಾಗಿ ಬಿದ್ದನುಜರಂ ಕಂಡು ಖತಿಯೊಳಾಂ
ವಿಶಿಖಮಂ ತೊಡುವೆನೆಂದೊಡೆ ಮನವೊಡಂಬಡದು ನಿಮ್ಮ ಜನನಸ್ಥಿತಿಗಳ
ವಿಶದ ವಿಸ್ತರವ ನೊರೆದೊಡೆ ನೋಡಿಕೊಳ್ವೆನೆನೆ
ಕುಶನೆಂದನಿಂತು ಲೋಕಾನಂದಕರವಾದ
ನಿಶಿತವಾಕ್ಯಂಗಳಂ ಜನಮೇಜಯ ಕ್ಷಿತಿಪ ಕೇಳಾ ರಘೂದ್ವಹಂಗೆ ೫

ಈ ತಪೋವನದೊಳೆಮ್ಮಿರ್ವರನವಳಿಯಾಗಿ
ಸೀತೆಯೊರ್ವಳೆ ಪಡೆದಳನುದಿನದೊಳಾರೈದು
ಜಾತೋಪನಯನಾದಿ ಕರ್ಮಂಗಳಂ ಮಾಡಿ ನಿಗಮಾಗಮ ಸ್ಮೃತಿಗಳ
ವ್ರಾತಮಂ ಬರಿಸಿ ಕಾರ್ಮುಕವೇದಮಂ ಕಲಿಸಿ
ನೀತಿಗಳನರುಹಿ ರಾಮಾಯಣವನೋದಿಸಿ ಮ
ಹಾತಿಬಲರೆನಿಸಿದಂ ವಾಲ್ಮೀಕಿ ಮುನಿಪನೆಂದೊರೆದು ಮಗುಳಿಂತೆಂದನು ೬

ರಾಮಚಾರಿತ್ರ ಪಠನಾಭ್ಯಾಸ ಯೋಗದಿಂ
ಕ್ಷೇಮಂ ಸುಪುಷ್ಟಿ ನಿಶ್ಚಲಮತಿ ನಿರಾಲಸ್ಯ
ಮೀಮಹಾಸ್ಥೈರ್ಯವಂ ಗೆಲ್ವಡಟು ತಮಗಾದುದೆಂದು ಕುಶನುಸಿರೆ ಕೇಳ್ದು
ಪ್ರೇಮದಿಂ ತನ್ನ ಸುತರೆಂದರಿದು ಸೀತೆಯಂ
ಬೀಮಾತು ಕಿವಿದಾಗಿದೊಡೆ ಬಿದ್ದು ಮೂರ್ಛೆವೆ
ತ್ತಾ ಮಹೀಶಂ ಕೂಡೆ ಚೇತನಂ ಬಡೆದು ಸುಗ್ರೀವನೊಡನಿಂತೆಂದನು ೭

ಕಪಿರಾಜ ಕೇಳ್ಕೆ ಕುಮಾರಕರ ನುಡಿಗಳಂ
ನಿಪುಣರಿವರಾವ ಪುರುಷಂಗೆ ಸಂಭವಿಸಿದರ್
ವಿಪಿನಚಾರಿಗಳ ನಿನ್ನೊಮ್ಮೆ ನೀಂ ಬೆಸಗೊಳೆನೆ ನಸುನಗುತೆ ಸುಗ್ರೀವನು
ತಪನಕುಲ ಜಾತರ್ ಪುರಾಣ ಪುರುಷೋತ್ತಮನ
ವಿಪುಲ ಸಂತತಿಗಳಿವರೀಕ್ಷಿಪೊಡೆ ದೇವ ನಿ
ನ್ನುಪ ರೂಪವಾಗಿರ್ಪುದಲ್ಲದೊಡವರ್ಗಿನಿತು ಸತ್ವಮೆತ್ತಣದೆಂದನು ೮

ಸುಗ್ರೀವ ರಾಘವರ್ ಮಾತಾಡುವನಿತರೊಳ್
ನಿಗ್ರಹಿಸಿಕೊಂಡಿರ್ದ ಕುದುರೆಯಂ ಬಿಡುವೊಡ
ಭ್ಯಗ್ರಮುಳ್ಳವನಾಗಿ ನೀಲನೈತರೆ ಕುಶಂ ಕೋಪದಿಂದಾ ಕಪಿಗಳ
ಅಗ್ರಣಿಯನೆಚ್ಚು ಕೆಡಪಿದೊಡವನ ರುಧಿರದಿಂ
ದುಗ್ರರೂಪದೊಳಿದ್ದುವಾ ನೀಲಕೋಟಿಗಳ್
ವಿಗ್ರಹಕ್ಕೆ ಕಡುಮುಳಿದು ಮರಗೊಂಬೆಬೆಟ್ಟ ಕಲ್ಗುಂಡುಗೊಂಡೆಲ್ಲೆಡೆಯೊಳು ೯

ನರ ವಾಜಿ ದಂತಿ ಮುಸು ಕರಡಿ ಸಿಂಗಳಿಕ ವಾ
ನರ ದಾನವರೊಳಿಡಿದ ಸೇನೆಯೊಳ್ ನೋಡಲೊ
ರ್ವರುಮಿಲ್ಲದೆಲ್ಲರುಂ ಬಿದ್ದು ತಾನೇಕಾಕಿಯಪ್ಪುದುಂ ಖಾತಿಗೊಂಡು
ಸರಳನರ್ಭಕರ ಮೇಲೆಚ್ಚಂ ರಘೂದ್ವಹಂ
ಧರೆಯೊಳೀ ಕ್ಷತ್ರಿಯರ ಮನವಾಸಿಗಳದೆಂತೊ
ತರಹರಿಸಬಾರದಿಹ ರಾಮಬಾಣಂಗಳೈದಿದುವು ಕಾಲಾಗ್ನಿಯಂತೆ ೧೦

ಬಚ್ಚೆವೋಗದ ರಾಮಬಾಣಂಗಳಂ ನಡುವೆ
ನುಚ್ಚುನೂರಾಗೆ ಕತ್ತರಿಸಿ ರಘುನಾಥನಂ
ಮುಚ್ಚಿದರ್ ಕಣೆಗಳಿಂ ಮತ್ತೆ ಕಾಕುತ್ಥ್ಸಂ ಕೆರಳ್ದು ಕುಶ ಲವರ ಮೇಲೆ
ಎಚ್ಚೊಡಾ ಕೋಲ್ಗಳಂ ಬಾಲಕರ್ ಮಧ್ಯದೊಳ್
ಕೊಚ್ಚಿ ರಾವಣ ರಿಪುವಿನಂಗಮಂ ನೋಯಿಸಿದ
ರಚ್ಚರಿಯ ಕಾಳೆಗಂ ತಂದೆಮಕ್ಕಳ್ಗೆ ನಡೆದುದು ಸುರರ್ ಬೆರಗಾಗಲು ೧೧

ಪಲ್ಲವಿತ ನವ ಚೂತತರು ಬೇಸಗೆಯ ಝಳಕೆ
ನಿಲ್ಲದಸವಳಿದು ಜೋಲ್ವಂತೆ ಕೋಮಲಕಾಯ
ದೆಲ್ಲೆಡೆಯೊಳಂ ನಾಂಟಿದಂಬುಗಳ ರುಧಿರ ಪ್ರವಾಹದಿಂದುರೆ ಬಳಲ್ದು
ಮೆಲ್ಲನೆ ವರೂಥದೊಳ್ ಸಾರಥಿವೆರಸಿ ಧರಾ
ವಲ್ಲಭಂ ಮೈಮರೆದು ಪವಡಿಸಿದನನಿಮಿಷರ್
ಚೆಲ್ಲಿದರ್ ಪೂಮಳೆಗಳಂ ಮೊಳಗಿದುವು ದೇವ ದುಂದುಭಿಗಳಂಬರದೊಳು ೧೨

ಏನಾದರೋ ತನಯರೆಂದು ಚಿಂತಿಸುತಿರ್ಪ
ಜಾನಕಿಗೆ ರಾಮಾದಿಗಳ ಭೂಷಣಂಗಳಂ
ಕಾನನದ ಬೇಂಟೆಯೊಳ್ ಸಿಕ್ಕಿ ಸೀಕರಿಗೊಂಬ ಮೃಗಪೋತಕಂಗಳಂತೆ
ಮೌನದಿಂ ಮೈಯುಡುಗಿ ನೊಂದೆಳೆತಟಕೆ ಬಿದ್ದ
ವಾನರಶ್ರೇಷ್ಠರಂ ತಂದಿತ್ತು ಚರಣದೊಳ್
ಸೂನುಗಳ್ ಪೊಡಮಡಲ್ಕಾ ಸೀತೆ ನಡುನಡುಗಿ ನಂದನರ್ಗಿಂತೆಂದಳು ೧೩

ಅರುಮರಿಯುದಪೊಲೀ ಕಾನನದೊಳಿರ್ದೆನಾಂ
ಧಾರಿಣೀಶರ ಭೂಷಣಂಗಳೇತಕೆ ನಮಗೆ
ವೀರ ಕಪಿವರರಿವರ್ ಜಗದೊಳಭಿಮಾನಿಗಳ್ ಭಂಗವೇಕಿಂತಿವರ್ಗೆ
ಘೋರಕರ್ಮಂಗಳಂ ಮಾಡಿದಿರಿ ಮಕ್ಕಳಿರ
ದಾರಿತಪ್ಪಿದಿರಿನ್ನು ವಾಲ್ಮೀಕಿಮುನಿವರಂ
ಬಾರದಿರನೀಗಳೆ ರಣದೊಳಿವರನಿರಿಸಿ ಬಹುದೆಂದಳವನಿಜೆ ಲವಂಗೆ ೧೪

ವೈದೇಹಿ ನುಡಿದುದಂ ಕೈಕೊಂಡು ಲವನವರ
ನುಯ್ದು ರಣರಂಗದೊಳ್ ಮಗುಳಿರಿಸಿ ಬಂದ ನಿರ
ದೈದೆ ನಾರದನಿಂದ ಕೇಳ್ದು ವಾಲ್ಮೀಕಿಮುನಿ ಪಾತಾಳಲೋಕದಿಂದೆ
ಮೈದೋರಲಾಶ್ರಮದ್ವಾರದೊಳ್ ಕಂಡು ಮೇ
ಲ್ವಾಯ್ದುಕ್ಕುವಾನಂದರಸದಿಂದೆ ವಂದನಂ
ಗೈದಳವನಿಜೆ ಮಣಿದರೆಲ್ಲರುಂ ಜಾನಕಿಯ ಸುತರೆರಗಿದರ್ ಪದದೊಳು ೧೫

ತಂದೆ ನೀವಿರಲೆಮಗೆ ಸುಕ್ಷೇಮಕರಮಪ್ಪು
ದೆಂದೆಂದುಮಿದು ನಿಜಂ ನಿಮ್ಮಡಿಗಳುಪದೇಶ
ದಿಂದರಿಗಳಂ ಗೆಲ್ದೆವೀನಿಮ್ಮ ಪುಣ್ಯಾಶ್ರಮದೊಳಾಯ್ತು ಭೂತ ಹಿಂಸೆ
ಬಂದುದೊಂದಶ್ವಮದನೀ ಲವಂ ಕಟ್ಟಿದಂ
ಮುಂದಿ ಕವಿದುದು ಮೇಲೆ ಶತ್ರುಘ್ನನುರುಬಿದಂ
ಸಂಧಿಸಿದೆ ನಾಂ ಬಳಿಕ ಸೌಮಿತ್ರಿ ಭರತ ರಾಮಾದಿಗಳ್ ನಡೆತಂದರು ೧೬

ಕಡೆಯ ಮಾತೇನಿನ್ನು ದೊರೆದೊರೆಗಳೆಲ್ಲರಂ
ಪಡೆಯೊಳ್ ನಿಶಾಟ ಕಪಿ ನರ ಚಾತುರಂಗಮಂ
ಕೆಡಹಿದೆವೆನಲ್ ಕುಶನ ನುಡಿಗೆ ಸ್ವೈವರೆಗಾಗಿ ವಾಲ್ಮೀಕಿಮುನಿ ಮನದೊಳು
ಕಡುನೊಂದನಕಟಕಟ ತಪ್ಪಾದುದೆನುತೆ ನಡು
ನಡುಗುತಿಹ ಸೀತೆಯಂ ಸಂತೈಸಿ ವಹಿಲದಿಂ
ನಡೆತಂದನೊಡನಿರ್ದ ತಾಪಸ ವಿತತಿ ಸಹಿತ ಸಂಗ್ರಾಮ ಭೂಮಿಗಾಗಿ ೧೭

ತಟ್ಟುಗೆಡದಿಹ ವಾಜಿ ವಾರಣ ವರೂಥದಿಂ
ದಿಟ್ಟಣಿಸಿ ಬಿದ್ದ ರಾಕ್ಷಸ ಮನುಜ ಕಪಿಗಳಿಂ
ದಿಟ್ಟಡಿದಗಲಕೆ ಚೆಲ್ಲಿದ ಛತ್ರ ಚಾಮರ ಪತಾಕೆಗಳ ಮೆದೆಗಳಿಂದೆ
ಒಟ್ಟೊಟ್ಟಿಲಾಗಿ ಸೂಸಿದ ಪಲವು ಕೈದುಗಳ
ಬೆಟ್ಟಂಗಳಿಂ ಮಿದುಳ್ನೆಣ ವಸೆ ಕರುಳ್ಗಳಿಂ
ಕಟ್ಟುಗ್ರಮಾದ ರಣರಂಗದೊಳ್ ವಾಲ್ಮೀಕಿಮುನಿ ರಾಮನಂ ಕಂಡನು ೧೮

ಈಕ್ಷಿಸಿ ಕಮಂಡಲೋದಕದಿಂದೆ ಮುನಿವರಂ
ಪ್ರೋಕ್ಷಿಸಿದೊಡುರಗ ತಲ್ಪದೊಳುಪ್ಪಡಿಸುವ
ಬ್ಜಾಕ್ಷನೀತಂ ತಪ್ಪದೆಂಬಂತೆ ಕಣ್ದೆರದು ವಾಲ್ಮೀಕಿಗಭಿನಮಿಸಲು
ಸಾಕ್ಷಾಜ್ಜಗನ್ನಾಥ ಸರ್ವಕಾರಣ ಸಕಲ
ರಾಕ್ಷಸಾಂತಕ ಭಕ್ತವತ್ಸಲ ಕೃಪಾಳು ನಿರ
ಪೇಕ್ಷ ರಾಘವ ರಾಮ ಚಿತ್ತಾವಧಾನವೆಂದಾ ಮುನಿ ಪೊಗಳುತಿರ್ದನು ೧೯

ರಾಜೇಂದ್ರ ಕೋಪಮಂ ಮಾಡದಿರ್ ನಿನ್ನಂ ಕೃ
ಪಾಜಲಧಿಯೆಂದು ಮರೆವೊಕ್ಕರಂ ಕಾವನೆಂ
ದೀಜಗಂ ಬಣ್ಣಿಪುದು ನಿನ್ನ ತನುಸಂಭವರ್ ಜಾನಕಿಯ ಮಕ್ಕಳಿವರು
ಓಜೆತಪ್ಪಿದರಾಶ್ರಮದೊಳಿರ್ದುದಿಲ್ಲ ಮಖ
ಯಾಜನಕೆ ವರುಣಂ ಕರೆಸಲಾಗಿ ಪೋದೆನೀ
ವ್ಯಾಜಮಂ ತಾನರಿಯೆನಪರಾಧಮೆನಿತುಳ್ಳೊಡಂ ಸೈರಿಸುವುದೆಂದನು ೨೦

ಜಾತಂ ವಿನೀತನಾಗಲಿ ಧೂರ್ತನಾಗಿರಲಿ
ತಾತಂಗೆ ವಿರಹಿತವೆ ನೋಡದಿರ್ ಬಾಲಕರ
ಶೀತಮಂ ಕ್ಷಮಿಸೆಂದು ವಾಲ್ಮೀಕಿ ನುಡಿಯೆ ರಾಘವ ನೂರ್ಮಿಳಾಪತಿಯನು
ಸೀತೆ ಸುತರಂ ಪಡೆದಳೆಂತೆನೆ ತವಾಜ್ಞೆಯಿಂ
ಶ್ವೇತನದಿಯಂ ದಾಂಟಿ ಪೂರ್ಣಗರ್ಭಿಣಿಯಾದ
ಭೂ ತನುಜೆಯಂ ಕಾನನದೊಳಿರಿಸಿ ಬಂದೆನಲ್ಲದೆ ಮುಂದರಿಯೆನೆಂದನು ೨೧

ಇಂತೆಂದು ಲಕ್ಷ್ಮಣಂ ನುಡಿಯೆ ವಾಲ್ಮೀಕಿ ಸಮ
ನಂತರದೊಳೇಕಾಕಿಯಾಗಿ ಜಾನಕಿ ವಿರಹ
ಸಂತಾಪದಿಂದಡವಿಯೊಳ್ ತೊಳಲುತಿರ್ದುದಂ ಕಂಡು ತನ್ನಾಶ್ರಮಕ್ಕೆ
ಸಂತೈಸಿ ಕೂಡೆ ಕೊಂಡೊಯ್ದುದಂ ಬಳಿಕಲ್ಲಿ
ಸಂತತಿಗಳಾದುದಂ ತಾನವರ್ಗಿಲ್ಲಿ ಪ
ರ್ಯಂತರಂ ಮಾಡಿಸಿದ ಕೃತ್ಯಂಗಳೆಲ್ಲಮಂ ಪೇಳ್ದಂ ರಘೂದ್ವಹಂಗೆ ೨೨

ಬಳಿಕ ವಾಲ್ಮೀಕಿ ನಿಜಶಿಷ್ಯರಂ ಸದನಕ್ಕೆ
ಕಳುಹಿ ತರಿಸಿದನಮಲ ವಲ್ಲಕಿಗಳಂ ತನ್ನ
ಬಳಿಯೊಳಭ್ಯಾಸಮಂ ಮಾಡಿಸಿದ ರಾಮಚಾರಿತ್ರಮಂ ತುದಿಮೊದಲ್ಗೆ
ಲಲಿತ ಸಾಳಂಗ ಸಾವೇರಿ ಗುಜ್ಜರಿ ಗೌಳ
ಪಳಮಂಜರಿಗಳೆಂಬ ವಿವಿಧ ರಾಗಂಗಳಂ
ಬಳಸಿ ಪಾಡಿಸಿದ ನೆರಡನೆಯ ತುಂಬುರು ನಾರದರ ತೆರದಿ ಕುಶ ಲವರನು ೨೩

ಸ್ಥಾಯಿ ಸಂಚಾರಿಗಳ ಸರಿಗಮ ಪಧನಿಯ ಸರ
ದಾಯತದ ಶುದ್ಧ ಸಂಕೀರ್ಣ ಸಾಳಗದ ಪೂ
ರಾಯತ ಸುತಾನಂಗಳಂ ತಾರ ಮಧ್ಯ ಮಂದ್ರಗಳಿಂದೆ ಸೊಗಸುಗೊಳಿಸಿ
ಗೇಯ ರಸಮೊಸರೆ ಪಾಡಿದರವರ್ ವಿನುತ ರಾ
ಮಾಯಣದ ಸುಶ್ಲೋಕಮಾಲೆಯಂ ಕೇಳ್ದು ರಘು
ರಾಯನುರೆ ಮೆಚ್ಚಿಕೊಂಡಾಡಿ ನಸುನಗೆಯಿಂದೆ ಸೌಮಿತ್ರಿಗಿಂತೆಂದನು ೨೪

ಭಾವಿಸೆಲೆ ಸೌಮಿತ್ರಿ ಬಾಲಕರ್ ಸುಲಲಿತ ವ
ಚೋ ವಿಲಾಸಂಗಳಿಂ ಸ್ವರದಿಂದೆ ರೂಪಿಂದೆ
ಲಾವಣ್ಯದಿಂದೆ ಗತಿಯಿಂದೆ ಚೇಷ್ಟೆಗಳಿಂದೆ ಸೀತೆಯಂ ನೆನೆಯಿಸುವರು
ದೇವಿಯನಗಲ್ದ ವಿರಹಾಗ್ನಿ ಸುತ ದರ್ಶನದ
ಜೀವನದೊಳುರೆ ನಂದಿತಾದುದಿನಕುಲದೇಳ್ಗೆ
ಭೂವಲಯದೊಳ್ ತನ್ನ ಬಾಣಮಂ ಬಂಜೆಗೈದಪರೆ ಪೊರಬಿಗರೆಂದನು ೨೫

ಆರ ತುಸುಜಾತರೆಲೆ ಮಕ್ಕಳಿರ ನಿಮಗಿನಿತು
ವೀರತ್ವಮೆತ್ತಣದು ಪೇಳ್ವುದೆಂದಾತ್ಮಜರ
ನಾರಾಘವಂ ಕೇಳ್ದೊಡವರಾವು ಜಾನಕಿಯ ಗರ್ಭಸಂಭವರೆಮ್ಮನು
ಆರೈದು ವಾಲ್ಮೀಕಿಮುನಿ ಸಲಹಿ ಸಕಲವಿ
ದ್ಯಾರಾಜಿಯಂ ಕಲಿಸಿದಂ ದೇವ ನಿನ್ನ ಪದ
ವಾರಿಜಕೆ ದ್ರೋಹಮಂ ಮಾಡಿದೆವು ಸೈರಿಸುವುದೆಂದೆರಗಿದರ್ ಪದದೊಳು ೨೬

ತನಯರಂ ತೆಗೆದೊಡನೆ ಮುಂಡಾಡಿ ಬಿಗಿಯಪ್ಪಿ
ಘನತರಸ್ನೇಹದಿಂ ಶಿರವನಾಘ್ರಾಣಿಸಿ ವ
ದನವ ನೊಡನೊಡನೆ ಚುಂಬಿಸಿ ಮತ್ತೆ ಮತ್ತೆ ವಾಲ್ಮೀಕಿಯಂ ಮಿಗೆ ಪೊಗಳುತೆ
ಅನುಜರಿಂದೊಡಗೂಡಿ ರಘುವರಂ ಸಂತೋಷ
ವನಧಿಯೊಳ್ ಮುಳುಗಿದಂ ಸುಕುಮಾರರಂ ಕೊಂಡು
ಕೊನರಿತು ಸಮಸ್ತ ಪರಿವಾರಮುತ್ಸವದಿಂದೆ ಮೊಳಗಿದುವು ವಾದ್ಯಂಗಳಂ ೨೭

ಬಳಿಕ ವಾಲ್ಮೀಕಿಯಂ ಸತ್ಕರಿಸಿ ಸೀತೆ ಭೂ
ತಳವರಿಯೆ ಪರಿಶುದ್ಧೆ ಲೋಕಾಪವಾದಕ್ಕೆ
ಕಳೆದೆನೆಂತಾದೊಡಂ ಪುತ್ರರಂ ಪಡೆದಳಿನ್ನರವರಿಸದೆನ್ನ ಬಳಿಗೆ
ಕಳುಹೆಂದು ಬೀಳ್ಕೊಂಡು ಸುತ ಸಹೋದರರೊಡನೆ
ದಳಸಹಿತ ಹಯವರಂ ವೆರಸಿ ನಿಜಪುರಕೆ ಬಂ
ದುಳಿದಿರ್ದ ಯಜ್ಞಮಂ ನಡೆಸಿದಂ ಮೂಜಗಂ ಪೊಗಳಲ್ಕೆ ರಘುನಾಥನು ೨೮



# ಟಿಪ್ಪಣಿಗಳು

## ರಣಚೌಪಟ

ಈ ಕಾವ್ಯಭಾಗವನ್ನು "ಕರ್ಣಾಟಕ ಭಾರತ ಕಥಾಮಂಜರಿ" ಅಥವಾ "ಗದುಗಿನ ಭಾರತ"ದ ದ್ರೋಣ ಪರ್ವದಿಂದ ತೆಗೆದುಕೊಂಡಿದೆ. ಗದುಗಿನ ಭಾರತದ ಕರ್ತೃ ಧಾರವಾಡ ಜಿಲ್ಲೆಯ ಗದುಗಿನ ತಾಲ್ಲೂಕಿನ ಕೋಳಿವಾಡ ಗ್ರಾಮದ ಶ್ಯಾನುಭೋಗ ಮನೆತನಕ್ಕೆ ಸೇರಿದ ನಾರಣಪ್ಪ. ಕುಮಾರವ್ಯಾಸ ಎಂಬುದು ಈತನ ಕಾವ್ಯನಾಮ. ಗದುಗಿನ ವೀರನಾರಾಯಣ ಸ್ವಾಮಿಯ ಸನ್ನಿಧಿಯಲ್ಲಿ ದಿವ್ಯ ಸ್ಫೂರ್ತಿಯ ಪ್ರೇರಣೆಯಿಂದ ಕಾವ್ಯ ರೂಪುಗೊಂಡಿತೆಂದು ಪ್ರತೀತಿ. 'ವೀರನಾರಾಯಣನೆ ಕವಿ, ಲಿಪಿಕಾಱ ಕುಮಾರವ್ಯಾಸ !' ಕವಿಯ ಕಾಲ, ಮತ, ಹೆಸರಿನ ಬಗ್ಗೆ ಭಿನ್ನಾಭಿಪ್ರಾಯವಿದ್ದು ವಿದ್ವಾಂಸರಿಂದ ವಿಪುಲ ಚರ್ಚೆಯಾಗಿದೆ. ದಂತಕಥೆ, ಪುರಾಣ, ಐತಿಹಾಸಿಕಾಂಶಗಳ ಆಧಾರದಿಂದ ವಿದ್ವಾಂಸರು ಅವನ ಕಾಲವನ್ನು ಸುಮಾರು ಕ್ರಿ.ಶ. ೧೪೩೦ ಇದ್ದಿರಬಹುದೆಂದು ಊಹಿಸುತ್ತಾರೆ. ಅವನ ಮತದ ಬಗೆಗೆ "ಅದ್ವೈತಿಯಾದ ಸ್ಮಾರ್ತ ಬ್ರಾಹ್ಮಣನೆಂದೂ ಹರಿಭಕ್ತಿ ನಿರತನಾದರೂ ಹರಿಹರರಲ್ಲಿ ಭೇದವನ್ನೆಣಿಸದ ಭಾಗವತ ಸಂಪ್ರದಾಯಿಯೆಂದೂ" ಹಲವು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ.

ಗದುಗಿನ ಭಾರತಕ್ಕೆ ಸಂಸ್ಕೃತದ ವ್ಯಾಸಭಾರತವೇ ಆಧಾರ. ಅಂದಾಕ್ಷಣ ಕುಮಾರವ್ಯಾಸನಿಗೆ ಸ್ವಂತ ಪ್ರತಿಭೆ ಇಲ್ಲವೆಂದಲ್ಲ. ಸಂಸ್ಕೃತ ಭಾರತವನ್ನ ಕನ್ನಡಿಸುವ ಪ್ರಕ್ರಿಯೆಯಲ್ಲಿ ಸಂಕೋಚ ವಿಸ್ತಾರಗಳಿವೆ, ಮೂಲ ತ್ಯಾಗ ಇಲ್ಲವೆ ವ್ಯತ್ಯಾಸಗಳಿವೆ. ಅದರಿಂದ "ಕನ್ನಡ ಭಾರತವು ವ್ಯಾಸಭಾರತದ

ಸರಳಾನುವಾದವಲ್ಲ, ಸ್ವತಂತ್ರ ಕಳೆಯುಳ್ಳ ಪ್ರತಿನಿರ್ಮಾಣ." ಮುರಹರನ ಚರಿತ್ರೆಯನ್ನು ಮನೋಹರವಾಗಿ ಹೇಳುವುದೇ ಕವಿಯ ಮುಖ್ಯ ಉದ್ದೇಶ. ವ್ಯಾಸಭಾರತಕ್ಕಿಂತಲೂ ಮುಂದೆ ಹೋಗಿ ಭಾಗವತ ಪ್ರಜ್ಞೆ ಕಲಾಪ್ರಜ್ಞೆಯ ಸಾರ್ಥಕತೆಯನ್ನು ಸಾಧಿಸಿದ್ದಾನೆ ಕವಿ. ಲವಲವಿಕೆ, ದೇಸಿ, ಕನ್ನಡಭಾಷೆಯ ಸತ್ವ ಕಾವ್ಯದಲ್ಲಿ ಮಿಡಿದಿದೆ. ಪದ ಪ್ರಯೋಗದ ಮೋಡಿ, ಪಾತ್ರಸೃಷ್ಟಿ, ಸನ್ನಿವೇಶ ರಚನೆಯಲ್ಲಿ ಸೃಜನಶೀಲ ಮನೋಭಾವ ಎದ್ದು ಕಾಣುವುದು. ಕುಮಾರವ್ಯಾಸ ಹಿರಿಯಕವಿ, ಗದುಗಿನ ಭಾರತ ಮಹಾಕಾವ್ಯ.

ದ್ರೋಣ ಕೌರವನಿಗೆ ಅರ್ಜುನನನ್ನು ದೂರ ಕೊಂಡೊಯ್ದರೆ ಧರ್ಮರಾಯನನ್ನು ಯುದ್ಧದಲ್ಲಿ ಕಟ್ಟುವುದಾಗಿ ಮಾತುಕೊಡುತ್ತಾನೆ. ಅದರಂತೆ ಸಮಸಪ್ತಕರು ಅರ್ಜುನನನ್ನು ಎದುರಿಸುತ್ತಾರೆ. ಇತ್ತ ದ್ರೋಣ ರಚಿಸಿದ ಪದ್ಮವ್ಯೂಹವನ್ನು ಪ್ರವೇಶಿಸಿ ಹೋರಾಡುವುದರಲ್ಲಿ ವಿಫಲನಾಗಿ ಭೀಮ ಹಿಂತಿರುಗುತ್ತಾನೆ. ಧರ್ಮರಾಯ, ಭೀಮ, ನಕುಲ ಸಹದೇವ ಮುಂತಾದ ವೀರರು ಚಿಂತಾಕ್ರಾಂತರಾಗಿದ್ದಾಗ, ಅಭಿಮನ್ಯು ಪದ್ಮವ್ಯೂಹವನ್ನ ಪ್ರವೇಶಿಸಿ ಶತ್ರು ಸೈನ್ಯವನ್ನ ಅರೆಯುತ್ತೇನೆಂದು ಹೇಳಿ ಧರ್ಮರಾಯನ ಅಪ್ಪಣೆಯನ್ನು ಬೇಡಲು, ಶತ್ರುಗಳು ಅಸಮವೀರರು ಇಂದು ವಿಜಯೋನ್ಮಾದದಲ್ಲಿದ್ದಾರೆಂದು ತಿಳಿಸಿ ಅಭಿಮನ್ಯುವನ್ನು ಶಿಶು ಎಂದು ತಡೆಯುತ್ತಾನೆ. ಅಭಿಮನ್ಯು ವಾದಿಸಿ ವಿಶ್ವಾಸ ಮೂಡುವಂತೆ ಮಾಡಿ ಧರ್ಮರಾಯನ ಅಪ್ಪಣೆ ಪಡೆದು ಹೊರಟು, ಜಯದ್ರಥನನ್ನು ಎದುರಿಸಿ, ಪದ್ಮವ್ಯೂಹವನ್ನ ಪ್ರವೇಶಿಸಿ ವೀರಾವೇಶದಿಂದ ಹೋರಾಡುತ್ತಾನೆ. ದ್ರೋಣ, ದುರ್ಯೋಧನ, ದುಶ್ಶಾಸನ, ಕರ್ಣ ಮುಂತಾದವರಿಗೆ ಅಭಿಮನ್ಯು ನುಂಗದ ತುತ್ತಾದನು. ಷಡುರಥರು ಒಟ್ಟಾಗಿಯೂ ನೇರವಾಗಿ ಬಾಲಕನನ್ನು ಎದುರಿಸಿ ಗೆಲ್ಲಲು ಸಾಧ್ಯವಾಗದೆ ಅಪಕೀರ್ತಿನಾರಿಯ ಸೆರಗ ಹಿಡಿದರು. ಹಿಂದಿನಿಂದ ಬಾಣ ಬಿಟ್ಟು ನಿರಾಯುಧನನ್ನಾಗಿಸಿ ಮೋಸ ದಿಂದ ಹೋರಾಡಿ ಅಭಿಮನ್ಯುವನ್ನು ಕೊಂದರು. ಈ ಪ್ರಸಂಗದಲ್ಲಿ ಅಭಿಮನ್ಯುವಿನ ಶೌರ್ಯ ಸಾಹಸ ಕಣ್ಣಿಗೆ ಕಟ್ಟುವಂತೆ ಚಿತ್ರಿತವಾಗಿದೆ.

## ೧. ಪದ್ಮವ್ಯೂಹ ರಂಜಿಸಿತು

೧-೪ ದುಗುಡ–ವ್ಯಥೆ. ನಾಯಕವಾಡಿ–ಶೂರರು. ಅಕ್ಕುಡರ್–ಸತ್ವ ಶಾಲಿಗಳು. ಮುಮ್ಮಳಿ–ನಿರ್ಬಲ. ಪವನಜ–ವಾಯುಪುತ್ರ, ಭೀಮ. ಉಬ್ಬಟೆ–ಶೌರ್ಯಾತಿರೇಕ. ಶೂಲಿ–ಶಿವ, ಶೂಲವನ್ನು ಆಯುಧವಾಗಿ ಉಳ್ಳವ.

೫ ಸಮಸಪ್ತಕರು–ಯುದ್ಧದಲ್ಲಿ ಶಪಥ ಮಾಡಿ (ಆಣೆಯಿಟ್ಟು) ಯುದ್ಧ ಮಾಡತಕ್ಕವರಿಗೆಲ್ಲ ಈ ಹೆಸರು ಸಲ್ಲುತ್ತದೆ. ಸಾಮಾನ್ಯವಾಗಿ ಭಾರತ ಯುದ್ಧ ದಲ್ಲಿ ತ್ರಿಗರ್ತರಾಜನಾದ ಸುಶರ್ಮ, ಅವನ ತಮ್ಮಂದಿರಾದ ಸತ್ಯೇಷು, ಸತ್ಯಕರ್ಮ, ಸತ್ಯದೇವ, ಸತ್ಯರಥ ಇವರೈವರಿಗೂ ಈ ಹೆಸರು ರೂಢಿಯಲ್ಲಿದೆ. ಇವರು ಒಂಬತ್ತು ಕೋಟಿ ಸೈನ್ಯದೊಂದಿಗೆ ಶಪಥಪೂರ್ವಕವಾಗಿ ಯುದ್ಧಮಾಡಿ, ಅರ್ಜುನನನ್ನು ಇದಿರಿಸಿ ಮಡಿದರು.

೬–೧೦ ಅಭ್ರ–ಮೋಡ, ಆಕಾಶ. ತಾರಕೆ–ನಕ್ಷತ್ರ. ತಾವರೆಯಸಖ–ಸೂರ್ಯ. ಕೆದಱು–ಸೂಸು. ನಿಸ್ಸಾಳ–ಭೇರಿವಾದ್ಯ. ಒದಱು–ಶಬ್ದಮಾಡು. ಕದುಬು–ಆವರಿಸು. ಕಲಶೋದ್ಭವ–ದ್ರೋಣ. ಉಲಿ–ಧ್ವನಿ. ತೆಕ್ಕೆ–ಸುರುಳಿ, ಸಿಂಬೆ. ವೆಂಠಣಿಸು–ಆಕ್ರಮಿಸು, ವ್ಯಾಪಿಸು. ಸುಯಿಧಾನ–ರಕ್ಷಣೆ. ಪಸರಿಸು–ಹರಡು. ಪ್ರಸರ–ಸಮೂಹ. ಒಸಗೆ–ಉತ್ಸವ. ಪತಾಕೆ–ಬಾವುಟ. ರಾವುತ–ಕುದುರೆ ಸೈನಿಕ. ಮುಱು–ನಾಶ. ಒಗ್ಗು–ಗುಂಪು. ಘಟೆ–ಸಮೂಹ. ಸಂದಣಿಸು–ಗುಂಪು.

೧೧–೧೫ ತರಣಿ–ಸೂರ್ಯ. ಹಿಳುಕು–ಬಾಣದ ಹಿಡಿಕೆ, ಬಾಣದ ಹಿಂತುದಿ. ಮೋಹರಿಸು–ಗುಂಪುಕೂಡು. ಕೆಲಬಲ–ಅಕ್ಕಪಕ್ಕ. ಕಾಲ–ಯಮ. ಭೂರಿಶ್ರವ–ಚಂದ್ರವಂಶದ ಸೋಮದತ್ತನ ಮಗ. ದುರ್ಯೋಧನನ ಪರವಾಗಿ ಹೋರಾಡಿದನು. ತುರಗ–ಕುದುರೆ. ದ್ವಿರದ–ಆನೆ. ಅವಗಡಿಸು–ತಿರಸ್ಕರಿಸು.

೧೬-೧೯ ನೂಕದು-ಸಾಧ್ಯವಾಗದು. ಶಿವನ ಬೇಡಿದ ಶರ-ಪಾಶು ಪತಾಸ್ತ್ರ. ಹವಣು-ಪ್ರಮಾಣ, ಸಾಧ್ಯತೆ. ಬವರ-ಯುದ್ಧ. ಮೋಹರ-ಯುದ್ಧ. ನಿರ್ಣಯ-ತೀರ್ಮಾನ. ಹುರುಡು-ಅಸೂಯೆ, ಸ್ಪರ್ಧೆ. ಆರೋಗಣೆ-ಊಟ. ಬಣಗು-ಬೆಲೆಯಿಲ್ಲದ, ಕ್ಷುಲ್ಲಕ, ಅಲ್ಪ.

೨೦-೨೩ ಮೊಗಸು-ಮುತ್ತು. ಪಟಹ-ತಂಬಟೆ, ಭೇರಿ. ಅಬ್ಬರಣೆ-ಆರ್ಭಟೆ, ಗಲಾಟೆ. ಗಬ್ಬರಿಸು-ವ್ಯಾಪಿಸು. ಕಮಲಭವಾಂಡ-ಬ್ರಹ್ಮಾಂಡ. ಉರವಣಿಸು-ಉತ್ಸಾಹಿಸು. ಥಟ್ಟೈಸು-ಮುತ್ತು. ರಿಪು-ಶತ್ರು. ಹರಿ ಮೇಖಲೆ-ಇಂದ್ರಜಾಲ, ಮಾಯಾವಿದ್ಯೆ. ಮುಗ್ಗು-ಮುಗ್ಗರಿಸು, ತಡವರಿಸು. ಖಾತಿ-ಕೋಪ. ಅಳವು-ಸಾಮರ್ಥ್ಯ. ಹೂಣೆ-ಪ್ರತಿಜ್ಞೆ. ಸಮರ-ಯುದ್ಧ.

## ೨. ನೇಮವ ಕೊಟ್ಟನಾಹವಕೆ

೧-೫ ಆಹವ-ಯುದ್ಧ. ಹೆಜ್ಜೆದೆಗೆ-ಹಿಂದಕ್ಕೆ ತೆಗೆ. ಅಗಿವ-ತಿನ್ನುವ. ನಿಗಳ-ಸರಪಳಿ. ಅಂಘ್ರಿ-ಪಾದ. ಬೆಸಸು-ವಿಧಿಸು. ಬೊಪ್ಪ-ತಂದೆ. ಅನುವರ-ಯುದ್ಧ. ಕೃತಾಂತ-ಯಮ. ಅದಟು-ಪರಾಕ್ರಮ. ಅಂಬುಧಿ-ಸಮುದ್ರ. ಸಂವರ್ತಕ-ಪ್ರಳಯಾಗ್ನಿ. ಅಣಲ=ಅಂಗಳ, ದವಡೆ. ಅಹಿಪ-ಮಹಾಶೇಷ. ಹದನು-ಸೂಕ್ತರೀತಿ.

೬-೧೦ ಲೆಪ್ಪದುರಗ-ಚಿತ್ರದೊಳಗಿನ, ಎರಕದ ಹಾವು. ಕೊಡನ ಮಗ-ದ್ರೋಣ. ವೆಗ್ಗಳ-ಶ್ರೇಷ್ಠ, ಅಗ್ಗಳ. ಅವನಿ-ಭೂಮಿ. ಮಾರ್ಜಾಂತು-ಪ್ರತಿಭಟಿಸಿ. ದಿವಿಜಪತಿ-ಇಂದ್ರ. ಅಸದಳ-ಅಸಾಧ್ಯ. ಅಡಹಾಯಿ-ಅಡ್ಡಹಾಯಿ. ವಹ್ನಿ-ಬೆಂಕಿ. ನಿಧಾನಿಸು-ವಿಚಾರಿಸು.

೧೧-೧೫ ತಿಂತಿಣಿ-ಸಮೂಹ. ಹೊಲ್ಲಹ-ಕೆಟ್ಟದ್ದು. ಬಿಗುಹು-ಬಿಗುಮಾನ. ಐದೆತನ-ಮುತ್ತೈದೆತನ. ಕೆತ್ತು-ಕವಿ. ಶರನಿಧಿ-ಸಮುದ್ರ. ವಡಬಾನಳ-ಸಮುದ್ರದೊಳಗಿರುವ ಬೆಂಕಿ. ನೇಮ-ಅಪ್ಪಣೆ. ಜವ-ಯಮ

೧೬-೧೯ ದಾವಾನಳ-ಕಾಡುಕಿಚ್ಚು. ಖಾಡಾಖಾಡಿ-ಮಲ್ಲಯುದ್ಧ. ತತಿ-ಸಮೂಹ. ಅಭಿವಂದಿಸು-ನಮಸ್ಕರಿಸು. ಪೊಡಮಟ್ಟು-ಅಡ್ಡಬಿದ್ದು, ನಮಸ್ಕರಿಸು. ಚತುಷ್ಟಯ-ನಾಲ್ಕು.

೨೦-೨೪ ಅಂಘೈಸು-ಇಚ್ಛಿಸು. ತರಣಿತನಯ-ಕರ್ಣ. ವದನ-ಮುಖ. ವಾಸವ-ಇಂದ್ರ. ಭಾರ್ಗವ-ಪರಶುರಾಮ. ಮಾಧವ-ಕೃಷ್ಣ. ಅಂಘೈಸು-ಹತ್ತಿರ ಬರು. ತ್ರಿಪುರಾರಿ-ಈಶ್ವರ. ತ್ರಿವಿಕ್ರಮ-ವಿಷ್ಣು. ತೊರಾರ-ಬಲಿಷ್ಠ. ತಱುಬು-ಅಡ್ಡಗಟ್ಟು.

## ೩. ಸೋತೆನಾವ್ ನೀ ಗೆಲಿದೆ

೧-೫ ಉಱುಬು-ಮೇಲೆಬೀಳು. ಗರುವ-ದೊಡ್ಡ. ಜವ-ವೇಗ ಕದಳಿ-ಬಾಳೆ. ಅಳವಿಗೊಡು-ಯುದ್ಧಕ್ಕೆನಿಲ್ಲು. ಜೋದರು-ಯೋದರು. ಘಟೆ-ಸಮೂಹ. ಹಯ-ಕುದುರೆ. ಜರುಹು-ನಾಶಮಾಡು. ವೈಿದೆಗೆ-ಹಿಂದೆಗೆ. ಕೈದು-ಆಯುಧ. ಮರಳುದಲೆ-ನಾಶಹೊಂದದೆ ರಕ್ಷಿಸಿಕೊಂಡು ಮರಳಿದ ತಲೆಯುಳ್ಳ. ಕೈಮಜಿ-ಆಶ್ಚರ್ಯ.

೯-೧೦ ಬೆಳವಿಗೆ-ಬೆಳೆಯುವಿಕೆ. ಅನ್ವಯ-ವಂಶ, ಕುಲ. ಮನ್ನೆಯ-ಶೂರ. ಮೊನೆಗಣೆ-ಚೂಪಾದ ಬಾಣ. ಖಾತಿ-ಕೋಪ. ಕೂರಂಬು-ಹರಿತವಾದ ಬಾಣ. ಮುಕ್ಕುಱುಕು-ಮುತ್ತಿಕೊಳ್ಳು. ತೋರ-ದೊಡ್ಡ.

೧೧ ಕೃಪ-ಗೌತಮ ವಂಶದ ಶರದ್ವತನೆಂಬ ಮುನಿಯ ಮಗ. ಪಾಂಡವರ ಪಕ್ಷಪಾತಿಯಾಗಿದ್ದರೂ, ಭೀಷ್ಮಾದಿಗಳಂತೆಯೇ ಕೌರವರ ಪಕ್ಷದಲ್ಲಿದ್ದ.

ಶಲ್ಯ-ಮದ್ರದೇಶಾಧಿ ಪತಿಯಾದ ಋತಾಯನನೆಂಬ ಅರಸನ ಮಗ. ಕುರುಕ್ಷೇತ್ರ ಯುದ್ಧದಲ್ಲಿ ದುರ್ಯೋಧನನ ಪರವಾಗಿ ಹೋರಾಡಿ ಮಡಿದ.

ಕೃತವರ್ಮ-ಭೋಜದೇಶದ ಅರಸನಾದ ಹೃದಿಕನ ಐದು ಮಂದಿ

ಮಕ್ಕಳಲ್ಲಿ ಮೂರನೆಯವನು. ಮಹಾಭಾರತ ಯುದ್ಧಾರಂಭದಲ್ಲಿ ಬಲರಾಮ ಇವನನ್ನು ಒಂದು ಅಕ್ಷೌಹಿಣೀ ಸೈನ್ಯದೊಂದಿಗೆ ದುರ್ಯೋಧನನ ಸಹಾಯಕ್ಕೆ ಕಳುಹಿಸಿದ್ದನು.

೧೨ ಹಸುಳೆತನದಲಿ ಹರನ ಮಗನಾ ವಿಷಮದೈತ್ಯನ ಸೀಳಿ ಬಿಸುಡನೆ– ತಾರಕಾಸುರನು ವಜ್ರಾಂಗನೆಂಬ ರಾಕ್ಷಸನ ಮಗನು. ಇವನ ತಾಯಿ ವರಾಂಗೀ. ಮಹಾದುಷ್ಟನಾದ ತಾರಕನು ಪಾರಿಯಾತ್ರವೆಂಬ ಪರ್ವತದಲ್ಲಿ ಬ್ರಹ್ಮನನ್ನು ಕುರಿತು ತಪಸ್ಸುಮಾಡಿ, ಅಂದಿನವರೆಗೆ ಅವತರಿಸಿದ್ದ ಯಾವ ದೇವತೆಯಿಂದಲೂ (ಅಂದರೆ ೧,೨,೩,೪,೫ ಮುಖಗಳುಳ್ಳವರಲ್ಲಿ ಯಾರಿಂದಲೂ) ಇತರರಿಂದಲೂ ತನಗೆ ಮರಣವು ಬಾರದಿರುವಂತೆ ವರವನ್ನು ಪಡೆದುಕೊಂಡನು. ಇವನು ರಾಕ್ಷಸರ ಮಹಾಸೇನೆಯೊಡನೆ ಮೂಲೋಕವನ್ನು ಪೀಡಿಸಲಾರಂಭಿದನು. ಆಗ ಷಣ್ಮುಖನು ಇವನ ಸಂಹಾರಾರ್ಥವಾಗಿ ಪಾರ್ವತಿಯ ಉದರದಲ್ಲಿ ಅವತರಿಸಿದನು. ಏಕೆಂದರೆ ಹಿಂದಿನ ದೇವತೆಗಳಿಂದ ತಾರಕಾಸುರನು ಸಂಹಾರವಾಗುವಂತಿರಲಿಲ್ಲ. ಷಣ್ಮುಖನು ಹುಟ್ಟಿದ ಏಳನೆಯ ದಿನವೇ ಯುದ್ಧಮಾಡಿ ತಾರಕಾಸುರನನ್ನು ಸಂಹರಿಸಿದನು.

ಶಿಶುವಲಾ ಪ್ರದ್ಯುಮ್ನ ಮುಱಿಯನೆ ಶಂಬರಾಸುರನ–ಪ್ರದ್ಯುಮ್ನನು ಶ್ರೀಕೃಷ್ಣನಿಂದ ರುಕ್ಮಿಣಿಯಲ್ಲಿ ಜನಿಸಿದನು. ಮನ್ಮಥನ ಅವತಾರ. ಸನತ್ಕುಮಾರಾಂಶ ಸಂಭೂತ. ಈತ ಜನಿಸಿದ ಕೂಡಲೇ ಶಂಬರಾಸುರ ಮಾಯಾ ರೂಪದಿಂದ ಬಂದು ಮಗುವನ್ನು ಎತ್ತಿಕೊಂಡು ಹೋಗಿ ಸಮುದ್ರದಲ್ಲಿ ಹಾಕಿದನು. ಆ ಮಗುವನ್ನು ಒಂದು ದೊಡ್ಡ ಮೀನು ನುಂಗಿತು. ಆ ಮೀನನ್ನು ಬೆಸ್ತರು ಹಿಡಿದು ಶಂಬರಾಸುರನ ಅರಮನೆಗೆ ಒಪ್ಪಿಸಿದರು. ಅಡುಗೆಯವರು ಮೀನನ್ನು ಕೊಯ್ಯಲಾಗಿ ಅದರಲ್ಲಿ ಕಂಡುಬಂದ ಮಗುವನ್ನು ರಾಣಿಯಾದ ಮಾಯಾವತಿಗೆ ಕೊಟ್ಟರು. ಅಷ್ಟರಲ್ಲಿ ನಾರದ ಅಲ್ಲಿಗೆ ಬಂದು ಆ ಮಗು ಮನ್ಮಥನೆಂತಲೂ, ಶಂಬರನನ್ನು ಇವನೇ ಕೊಲ್ಲತಕ್ಕವನೆಂತಲೂ ಹೇಳಿದನು. ಬಳಿಕ ಮಾಯಾವತಿ ಆ ಮಗುವನ್ನು ಅಕ್ಕರೆಯಿಂದ ಸಾಕಿ,

ಪ್ರಾಪ್ತ ವಯಸ್ಕರನಾದಮೇಲೆ ಶಂಬರನ ಮಾಯಾ ವಿದ್ಯೆಗಳನ್ನೂ ಅದಕ್ಕಿಂತಲೂ ಅತಿಶಯವಾದ ಮಹಾ ಮಾಯಾ ವಿದ್ಯೆಯನ್ನೂ ಆತನಿಗೆ ಉಪದೇಶಿಸಿ, ಆತನ ಮೂಲಕ ಶಂಬರನನ್ನು ಕೊಲ್ಲಿಸಿ, ಅವನನ್ನು ರುಕ್ಮಿಣಿಯಲ್ಲಿಗೆ ಕರೆತಂದು ಒಪ್ಪಿಸಿದಳು. ಅಷ್ಟರಲ್ಲಿ ನಾರದ ಅಲ್ಲಿಗೆ ಬಂದು ನಡೆದ ಸಮಾಚಾರವನ್ನೆಲ್ಲಾ ವಿವರಿಸಲು ರುಕ್ಮಿಣಿ ಆನಂದದಿಂದ ತನ್ನ ಪುತ್ರನನ್ನು ಸ್ವೀಕರಿಸಿದಳು.

೧೪ ಬಾಹ್ಲಿಕ–ಬಾಹ್ಲಿಕದೇಶದ ಅರಸು. ಭಾರತ ಯುದ್ಧದಲ್ಲಿ ದುರ್ಯೋಧನನ ಪರವಾಗಿ ಹೋರಾಡಿ ಮಡಿದ.

ಸೌಬಲ–ಸುಬಲನ ಮಕ್ಕಳು. ಶಕುನಿ ಮುಂತಾದವರು.

ಸೋಮದತ್ತ–ಒಬ್ಬ ಅರಸು. ಚಂದ್ರ ವಂಶದ ಪ್ರತೀಪ ರಾಜನ ಮಗನಾದ ಬಾಹ್ಲಿಕರಾಜನ ಮಗ. ಈತ ಭಾರತ ಯುದ್ಧದಲ್ಲಿ ದುರ್ಯೋಧನನ ಪರವಾಗಿ ಹೋರಾಡಿ, ಹದಿನೈದನೆಯ ದಿನ ಸಾತ್ಯಕಿಯೊಂದಿಗೆ ಯುದ್ಧ ಮಾಡಿ ಸೋತು, ಮರಳಿ ಆತನನ್ನು ಕೆಣಕಿ ಸತ್ತನು.

೧೬–೨೦ ಮಡಮುಱ–ಹಿಮ್ಮೆಟ್ಟುವುದು. ಡೋಱುಗಳೆ–ತೂತುಮಾಡು, ಚೂರು ಮಾಡು.

ಊಣಯ–ಕುಂದು, ದೋಷ. ಅಂಘವಣೆ–ಸಾಮರ್ಥ್ಯ. ಥಡಾಳತನ–ಅತಿಶಯತೆ. ಧರಧುರದ–ಭೀಕರವಾದ. ದೆಖ್ಖಾಳ–ಗೊಂದಲ. ಬರಿ–ಮಗ್ಗುಲು, ಪಕ್ಕ. ಸೈಗೆಡೆ–ಅಡ್ಡಬೀಳು.

೨೧–೨೫ ಹಿಳುಕು–ಬಾಣದ ಹಿಂತುದಿ. ಹರಿಬ–ಕರ್ತವ್ಯ, ಹೊಣೆ. ನಿಶಾತ–ಹರಿತವಾದ. ತರಹರ–ಸಮಾಧಾನ. ತಗಹು–ಎಡರು, ಪ್ರತಿಬಂಧ.

೨೬–೩೦ ಊರುಗರು–ಹಳ್ಳಿಗರು, ಕಾಡುಜನರು. ಬಿನುಗು–ಕ್ಷುಲ್ಲಕ. ದನುಜ–ರಾಕ್ಷಸ. ದಿವಿಜ–ದೇವತೆ. ಹಳವಿಗೆ–ಧ್ವಜ. ಸೀಗುರಿ–ಚಾಮರ. ಹಳಚು–ಕಾದಾಡು.

೩೧-೩೫ ತರುವಲಿ-ಬಾಲಕ, ಅಸಹಾಯಕ. ಹೊಳ್ಳು-ಜಳ್ಳು. ಕಿಬ್ಬರಿ-ಕೆಳಭಾಗ. ಬಾಸಣಿಸು-ವ್ಯಾಪಿಸು. ಸಾಯಕ-ಬಾಣ.

೩೬-೪೬ ಮಿಹಿರ-ಸೂರ್ಯ. ಗೋಣು-ಕುತ್ತಿಗೆ. ಕೇಣಿಕಾಱರು-ವ್ಯಾಪಾರಗಾರರು, ಗೇಣಿದಾರರು, ಚೇಣಿಕಾರರು. ಅನುವು-ಒಳಬಗೆ, ಉಪಾಯ. ಬವರ-ಯುದ್ಧ. ಕಡುಗು-ಉತ್ಸಾಹ. ಅಂತಕ-ಯಮ. ಬಾದಣ-ತೂತು.

೪೭-೫೦ ಛಡಾಳಿಸು-ಮೇಲಕ್ಕೇರು, ಹೆಚ್ಚು. ತೃಪ್ತ-ತುಪ್ತ. ನಿಟಿಲ ನೇತ್ರ-ಹಣೆಯಲ್ಲಿ ಕಣ್ಣುಳ್ಳವನು, ಶಿವ. ಲಟಕಟಸು-ಉದ್ವೇಗಗೊಳ್ಳು. ದೆಖ್ಖಾದೆಖ್ಖಿ-ಏರಾಟ. ಪರುಠವಿಸು-ಸಿದ್ಧಗೊಳಿಸು. ಪಡಿಬಲ-ಪ್ರತಿಬಲ. ತೆಱಹು-ಅವಕಾಶ, ತೆಱಪು. ಹೆಱತೆಗೆ-ಹಿಂದೆಸರಿ. ಕಡುಹು-ಪರಾಕ್ರಮ.

೫೧ ಶಿವನ ಕೃಪೆಯೆನಗುಂಟು ಮುನ್ನೆ ಸುತಾಜಯದ್ರಥನು-ಒಮ್ಮೆ ಸಾಳ್ವ ಪುತ್ರಿಯ ಸ್ವಯಂವರಕ್ಕೆ ಜಯದ್ರಥನು ಹೋಗುತ್ತಿದ್ದಾಗ, ಕಾಮ್ಯಕವನದಲ್ಲಿ ದ್ರೌಪದಿ ಒಂಟಿಯಾಗಿರುವುದನ್ನು ಕಂಡು ಮೋಹಿಸಿ ಬಲಾತ್ಕಾರದಿಂದ ರಥದಲ್ಲಿ ಕರೆದೊಯ್ದನು. ಅಷ್ಟರಲ್ಲಿ ಬೇಟೆಯಾಡಿ ಹಿಂತಿರುಗಿದ ಪಾಂಡವರಿಗೆ ವಿಷಯ ತಿಳಿಯಿತು. ತಕ್ಷಣ ಭೀಮ ಬೆನ್ನಟ್ಟಿ ಅಣ್ಣನ ಮಾತಿನಂತೆ ಜಯದ್ರಥನನ್ನು ಕೊಲ್ಲದೆ ದ್ರೌಪದಿಯನ್ನು ಬಿಡಿಸಿಕೊಂಡು ಬಂದನು. ಅಪಮಾನಗೊಂಡ ಜಯದ್ರಥ ಸ್ವಯಂವರಕ್ಕೆ ಹೋಗದೆ ಗಂಗಾದ್ವಾರದಲ್ಲಿ ಬಂದು ನಿಂತು ಶಿವನನ್ನು ಕುರಿತು ತೀವ್ರ ತಪಸ್ಸಿನಲ್ಲಿ ತೊಡಗಿದನು. ಶಿವನು ಪ್ರತ್ಯಕ್ಷನಾಗಲು ಜಯದ್ರಥ ಐದು ಮಂದಿ ಪಾಂಡವರನ್ನೂ ತಾನೊಬ್ಬನೇ ಗೆಲ್ಲುವಂತೆ ವರವನ್ನು ಬೇಡಿಕೊಂಡ. ಆದರೆ ಶಿವನು "ಅರ್ಜುನನ ಹೊರತು ಮಿಕ್ಕ ನಾಲ್ವರನ್ನೂ ನೀನು ಒಮ್ಮೆ ಮಾತ್ರ ಗೆಲ್ಲುವೆ" ಎಂಬುದಾಗಿ ವರವಿತ್ತು ಕಣ್ಮರೆಯಾದನು. ಭಾರತದ ಯುದ್ಧದ ಹದಿಮೂರನೆಯ ದಿನ ಅರ್ಜುನನು ಸಂಸಪ್ತಕರ ಯುದ್ಧಕ್ಕಾಗಿ ಬೇರೆ ಕಡೆ ಹೋಗಿದ್ದಾಗ, ದ್ರೋಣಾಚಾರ್ಯರು ಪದ್ಮವ್ಯೂಹವನ್ನ ರಚಿಸಿ, ಅಂದಿನ ದಿನದಲ್ಲಿ ಪಾಂಡವರ ಸೇನೆಯಲ್ಲಿ ಮಹಾರಥನೊಬ್ಬನನ್ನು

ಕೊಲ್ಲುವೆನೆಂದು ಪ್ರತಿಜ್ಞೆ ಮಾಡಿದ್ದನು. ಯುಧಿಷ್ಠಿರನ ಆಜ್ಞೆಯಂತೆ ಅಭಿಮನ್ಯು ಚಕ್ರವ್ಯೂಹವನ್ನು ಭೇದಿಸಿ ಒಳಹೊಕ್ಕನು. ಅಡ್ಡಲಾಗಿ ನಿಂತಿದ್ದ ಜಯದ್ರಥ ಯುಧಿಷ್ಠಿರಾದಿಗಳಿಗೆ ಅವಕಾಶವನ್ನು ಕೊಡಲಿಲ್ಲ.

೫೦-೫೫ ಅನಿಲಜ-ವಾಯುಪುತ್ರ, ಭೀಮ. ಧುರ-ಯುದ್ಧ. ಗೋನಾಳಿ-ಗೋಮಾಳೆ, ಗಂಟಲು. ಮುಸಗು-ರೋಷಗೊಳ್ಳು, ಮೇಲೆ ಬೀಳು.

೫೬-೬೩ ಬೀಸರ-ಅಳಿವು, ನಾಶ. ಸರವಿ-ಹಗ್ಗ. ತಳಿತ-ಚಿಗುರಿದ. ಚೂತ-ಮಾವು. ದಂಷ್ಟ್ರ-ದಾಡೆ. ಹೊಗರು-ಕಾಂತಿ.

## ೪. ಸಿಡಿಲು ಜಂಗಮವಾಯ್ತೊ

೧-೪ ಒಗ್ಗು-ಗುಂಪು. ಅಡಗು-ಮಾಂಸ. ಜಂಬುಕ-ನರಿ. ಕಾಕ-ಕಾಗೆ. ತರುವಲಿ-ಬಾಲಕ, ಅಸಹಾಯಕ. ಮುಂಗುಡಿ-ದಳದ ಮುಂಭಾಗ.

೫ ನಿದ್ರೆಯ ಮುಸುಕಿನಲಿ ಗೋಗ್ರಹಣದಲಿ ಜೀವಿಸಿದ ಜಾಣರು-

ಅಜ್ಞಾತ ವಾಸದಲ್ಲಿದ್ದಾಗ ಪಾಂಡವರನ್ನು ಪತ್ತೆ ಹಚ್ಚಿ ಮತ್ತೆ ಹದಿಮೂರು ವರುಷ ಅವರನ್ನು ಕಾಡಿಗೆ ಕಳುಹಿಸುವ ಕುಹಕದಿಂದ ಕೌರವ ಸೈನ್ಯ ವಿರಾಟ ನರಗರದ ತುರುಗಳನ್ನು ಸೆರೆ ಹಿಡಿಯಿತು. ಅರ್ಜುನ ಕೌರವ ಸೈನ್ಯವನ್ನು ಎದುರಿಸಬೇಕಾದ ಅನಿವಾರ್ಯ ಪ್ರಸಂಗ ಬಂದೊದಗಿತು. ಕೌರವನ ಸಕಲ ಬಲ ಬಂದು ಮೇಲೆ ಬೀಳುವುದನ್ನು ಕಂಡ ಅರ್ಜುನ ಸಮ್ಮೋಹನಾಸ್ತ್ರವನ್ನು ಬಿಟ್ಟನು. ಅದು ಕೂಡಲೇ ಕೌರವ ಸೈನ್ಯವನ್ನು ಮೂರ್ಛೆಗೊಳಿಸಿತು. ಭೀಷ್ಮ, ದ್ರೋಣ, ಕರ್ಣ, ಅಶ್ವತ್ಥಾಮ, ಕೃಪ ಮೊದಲಾದ ವೀರಾಧಿವೀರರು ನಿದ್ರಾಸಕ್ತರಾದರು. ಆ ರೀತಿ ಕೌರವನ ಏಕಾದಶಾಕ್ಷೋಹಿಣಿ ಸೈನ್ಯವನ್ನು ಅರ್ಜುನನೊಬ್ಬನೇ ಯುದ್ಧದಲ್ಲಿ ಸೋಲಿಸಿದನು.

೬-೧೨ ಸಘಾಡಿಕೆ-ಅತಿಶಯತೆ. ಬೋಳೆಯ-ದಿವ್ಯ. ಕೋಡು-ನಡುಗು.

ತೋಡು ಬೀಡು-ತೊಡುವುದು ಬಿಡುವುದು. ಮೃಗಪೋತ-ಜಿಂಕೆಮರಿ ಹರಿ-ಸಿಂಹ.

೧೩-೨೦ ಅಡಸು-ಮೇಲೆಬೀಳು. ಜವಗೆಡಿಸು-ಬಲಹೀನಗೊಳಿಸು. ಕಟಕ-ಸೈನ್ಯ. ಶೋಣಿತ-ರಕ್ತ. ಹೂಸಕ-ಕಪಟ. ಅಲಗಣಸು-ಕತ್ತಿಯ ಸ್ಪರ್ಶ, ಸೋಲಿಸು, ಮಿಾರಿಸು. ಧಾತುಗೆಡು-ಬಲಹೀನನಾಗು. ಅಸು-ಪ್ರಾಣ. ಗಸ್ನ-ಮೋಸ. ವಹಿಲ-ತ್ವರೆ, ಬೇಗ.

೨೧-೩೦ ಭಾಳನಯನ-ಹಣೆಗಣ್ಣ. ಕವಹು-ಕವ. ಕೃತಾಂತ-ಯಮ. ಏಜು-ಗಾಯ. ಪಿನಾಕಿ-ಈಶ್ವರ. ದಳವುಳ-ಸೂರೆ. ವಿಸಟಂಬರಿ-ಮನಬಂದತೆ ಸಂಚರಿಸು. ದಾತಾರ-ಯಜಮಾನ. ಕೇವಣಿಸಿ-ಪೋಣಿಸಿ. ವಿಗಡ-ಪರಾಕ್ರಮ, ಶೌರ್ಯ.

೩೧-೪೦ ಬೀದಿವರಿ-ಮನಬಂದಂತೆ ಹರಿದಾಡು. ಮಂಡಳಿಸು-ದಟ್ಟವಾಗು, ಹಬ್ಬು. ವಾಘೆ-ಲಗಾಮು, ಕಡಿವಾಣ. ತೂಳು-ಕೆಡವು, ಎಚ್ಚರ ತಪ್ಪಿಸು. ಕುಸುರಿದರಿ-ಚೂರು ಚೂರು ಮಾಡು. ನಿಪ್ಪಸರ-ಕ್ರೂರತನ, ನಿಷ್ಠುರತೆ. ವರುಷ-ಮಳೆ. ಕೇಕಿ-ನವಿಲು. ಮುಗಳ್-ಮೊಗ್ಗು. ಘೂಕ-ಗೂಬೆ. ಧ್ವಾಂಕ್ಷ-ಕಾಗೆ. ಮಧುಕರ-ದುಂಬಿ. ಪ್ರತತಿ-ಸಮೂಹ. ವಾರಣ-ಆನೆ. ಅಭ್ರ-ಮೋಡ, ಆಕಾಶ. ಮಸ್ತಕ-ತಲೆ. ಜೀಕೊಳವೆ-ಪಿಚಕಾರಿ. ಜವ-ಯಮ.

೪೧-೫೦ ವಾಜಿ-ಕುದುರೆ. ಘರಟ್ಟ-ಬೀಸುವ ಕಲ್ಲು. ಚಾಳಿಸು-ಚಪಲಪಡಿಸು. ಪಾಯದಳ-ಪದಾತಿ, ಕಾಲ್ದಳ. ನಾರಾಚ-ಬಾಣ. ಇಭ-ಆನೆ. ತತಿ-ಸಮೂಹ. ತಳತಂತ್ರ-ಸೈನ್ಯ. ಅನಿಮಿಷ-ದೇವತೆ. ಕರವಾಳ-ಕತ್ತಿ. ಅಣೆ-ಮುಟ್ಟು, ಚುಚ್ಚು.

೫೧-೫೮ ಹೊಡಕರಿಸು-ಯುದ್ಧದಲ್ಲಿ ಸೇರು. ಓಳಿ-ಸಮೂಹ, ಗುಂಪು. ಬಸವಳಿದು-ಬಲಹೀನ, ನಿಶ್ಶಕ್ತನಾಗು. ಹೊಗರು-ಕಾಂತಿ. ಶಕ್ರ-ಇಂದ್ರ.

ಧಗೆ-ಭಯ. ಡಾವರ-ವಿಪತ್ತು, ಕ್ಷೋಭೆ. ದೃಗುಜಲ-ಕಣ್ಣೀರು. ವಾಸವ-ಇಂದ್ರ. ಬಳಚು-ಕತ್ತರಿಸು, ಸವರು.

## ೫. ಶೋಕವಿನ್ಮಡಿಸಿತ್ತು

೩. ಕುಲಿಶ-ವಜ್ರಾಯುಧ. ಕುಲಶಿಲೋಚ್ಚಯ-ಕುಲಗಿರಿ. ಕುಲಿಶ ಹತಿಯಲಿ ಕುಲಶಿಲೋಚ್ಚಯವಿಳೆಗೆ ಕೆಡೆವಂದದಲಿ-ಕುಲಗಿರಿಗಳು ಏಳು : ಮಹೇಂದ್ರ, ಮಲಯ, ಸಹ್ಯ, ಶುಕ್ತಿಮಂತ, ಋಕ್ಷಮಂತ, ವಿಂಧ್ಯ, ಪಾರಿಯಾತ್ರ. ಹಿಂದೆ ಈ ಪರ್ವತಗಳಿಗೆ ರೆಕ್ಕೆಗಳಿದ್ದುವಂತೆ. ಅವು ಅಲ್ಲಿ ಇಲ್ಲಿ ಹಾರಾಡುತ್ತ ಲೋಕಕಂಟಕಕಾರಿಯಾಗಿದ್ದುವು. ಆಗ ಇಂದ್ರ ವಜ್ರಾಯುಧದಿಂದ ಅವುಗಳ ರೆಕ್ಕೆಗಳನ್ನು ಕತ್ತರಿಸಿ, ಲೋಕ ಕಲ್ಯಾಣವನ್ನು ಸಾಧಿಸಿದನೆಂದು ಕತೆ ರೂಢಿಯಲ್ಲಿದೆ.

೬-೧೨ ಗಜಬಜ-ಗದ್ದಲ, ಕೋಲಾಹಲ. ಮುರಜ-ಮದ್ದಳೆ. ಆನನ-ಮುಖ. ಕೊಳಗುಳ-ಯುದ್ಧ. ·ದಿವೌಕಸರು-ದೇವತೆಗಳು.

೧೩ ದ್ವೈಪಾಯನ-ವ್ಯಾಸ ಮಹರ್ಷಿ. ಕೃಷ್ಣವರ್ಣದ ಯಮುನಾ ನದಿಯ ಒಂದು ದ್ವೀಪದಲ್ಲಿ ಹುಟ್ಟಿದವನಾದುದರಿಂದ ಕೃಷ್ಣ ದ್ವೈಪಾಯನನೆಂತಲೂ, ಬದರೀ ವನದಲ್ಲಿ ಆಶ್ರಮವನ್ನು ಕಲ್ಪಿಸಿಕೊಂಡು ತಪಸ್ಸು ಮಾಡುತ್ತಿದ್ದನಾದುದರಿಂದ ಬಾದರಾಯಣನೆಂತಲೂ, ಪರಾಶರ ಮುನಿಯ ಪುತ್ರನಾದುದರಿಂದ ಪರಾಶರ್ಯನೆಂತಲೂ, ವೇದಗಳನ್ನು ವಿಭಾಗಮಾಡಿದ ಕಾರಣ ವೇದವ್ಯಾಸನೆಂತಲೂ ಹೆಸರು. ಈತ ಪರಾಶರ ಮುನಿಯಿಂದ ಸತ್ಯವತೀ (ಮತ್ಸ್ಯಗಂಧೆ) ಯಲ್ಲಿ ಜನಿಸಿದವನು. ಅಭಿಮನ್ಯುವಿನ ಕೊಲೆಯಿಂದ ಸಂಕಟಪಡುತ್ತಿದ್ದ ಯುಧಿಷ್ಠಿರನನ್ನು ಸಂತೆಯಿಸಿದನು.

೧೬ ಹರನೊಡನೆ ಹೊಯ್ದಾಡಿದಗ್ಗದ ನರನು-

ಮುಂದೊದಗಬಹುದಾದ ಕುರುಕ್ಷೇತ್ರ ಯುದ್ಧಕ್ಕಾಗಿ ಇಂದ್ರ ಮಹೇಶ

ರಿಂದ ದಿವ್ಯಾಸ್ತ್ರಗಳನ್ನ ಪಡೆಯಲು, ಧರ್ಮರಾಯನಿಂದ ಮಂತ್ರೋಪದೇಶ ಪಡೆದು, ಅರ್ಜುನನು ಇಂದ್ರಕೀಲ ಪರ್ವತದಲ್ಲಿ ತಪಸ್ಸಿಗೆ ತೊಡಗಿದನು. ಇಂದ್ರನು ವೃದ್ಧ ವಿಪ್ರವೇಷದಲ್ಲಿ ಬಂದು ಪರೀಕ್ಷಿಸಿ ಅರ್ಜುನನ ಸ್ಥೈರ್ಯವನ್ನು ಮೆಚ್ಚಿ ಶಿವನನ್ನು ಕುರಿತು ತಪಸ್ಸು ಮಾಡುವಂತೆ ತಿಳಿಸಿದನು. ಶಿವನು ಅರ್ಜುನನ ತೀವ್ರ ತಪಸ್ಸನ್ನು ತಿಳಿದು ಕಿರಾತ ವೇಷದಲ್ಲಿ ಪಾರ್ವತಿಯೊಂದಿಗೆ ಇಂದ್ರಕೀಲ ಪರ್ವತಕ್ಕೆ ಬಂದನು. ಆಗ ಮೂಕ ದಾನವನೆಂಬ ರಾಕ್ಷಸ ಹಂದಿ ರೂಪದಲ್ಲಿ ನುಗ್ಗಿದನು. ಶಿವ ಮತ್ತು ಅರ್ಜುನರಿಂದ ಏಕ ಕಾಲದಲ್ಲಿ ಬಿಡಲ್ಪಟ್ಟ ಬಾಣದಿಂದ ಬಿದ್ದ ಹಂದಿ ಯಾರ ಬಾಣದಿಂದ ಸತ್ತಿತೆಂಬ ವಿಷಯವಾಗಿ ವಾದವಿವಾದ ಬೆಳೆದು ಕೊನೆಗೆ ಮಲ್ಲಯುದ್ಧ ನಡೆದು ಕಿರಾತನ ಹೊಡೆತದಿಂದ ಅರ್ಜುನ ಮೂರ್ಛೆ ಹೋದನು. ಎಚ್ಚರ ಗೊಂಡಾಗ ತಾನು ಲಿಂಗಕ್ಕೆ ಅರ್ಪಿಸಿದ್ದ ಹೂವುಗಳು ಕಿರಾತನ ತಲೆಯ ಮೇಲೆ ಕಂಡು ಚಕಿತನಾಗುತ್ತಾನೆ. ಆಗ ಶಿವನು "ಅರ್ಜುನ! ಏಳು ನನ್ನನ್ನು ನೋಡು! ನಿನ್ನ ಧೈರ್ಯ ಶೌರ್ಯಗಳನ್ನು ನೋಡಿ ನನಗೆ ತುಂಬ ಸಂತೋಷವಾಗಿದೆ. ಕ್ಷತ್ರಿಯರಲ್ಲಿ ನಿನಗೆ ಸಮರಾದವರು ಯಾರೂ ಇಲ್ಲ. ತೇಜಸ್ಸಿನಲ್ಲಿಯೂ, ವೀರ್ಯದಲ್ಲಿಯೂ ನನಗೆ ಸಮಾನನಾದವನು ನೀನು" ಎನ್ನುತ್ತಾನೆ. ಅರ್ಜುನನು ಶಿವನ ಪಾದದ ಮೇಲೆ ಹೊರಳಿ ಕ್ಷಮೆಯನ್ನು ಯಾಚಿಸುತ್ತಾನೆ. ಶಿವನು ಅರ್ಜುನನನ್ನು ತಬ್ಬಿಕೊಂಡು ಅವನ ಪರಾಕ್ರಮವನ್ನು ಮೆಚ್ಚಿ ಪಾಶುಪತಾಸ್ತ್ರವನ್ನು ಕರುಣಿಸುತ್ತಾನೆ. ಆಗ ಸಕಲ ದಿಕ್ಪಾಲಕರೂ ಆಗಮಿಸಿ ತಮ್ಮಲ್ಲಿದ್ದ ದಿವ್ಯಾಸ್ತ್ರಗಳನ್ನು ಅನುಗ್ರಹಿಸುತ್ತಾರೆ.

## ೬. ಹರನ ಕೋಪವ ಕೇಣಿಗೊಂಡನು

೧-೧೩. ಹಯ-ಕುದುರೆ. ಬೋಳೈಸು-ಚಪ್ಪರಿಸು, ಸಮಾಧಾನಮಾಡು. ಧನಂಜಯ-ಅರ್ಜುನ. ಅಣುಗ-ಮಗ. ಹರಿ-ಕೃಷ್ಣ. ಗಡಣ-ಸಮೂಹ. ಕನಲು-ರೇಗು, ಸಿಟ್ಟಾಗು

೧೪-೨೬ ಪರಿಭವ-ಅಪಮಾನ. ಆನೆವರಿದು-ಆನೆಮರಿಯಂತೆ ಹರಿದು.

ಯುಧಾಮನ್ಯು-ಪಾಂಚಾಲ ದೇಶದ ಅರಸು. ಪಾಂಡವ ಪಕ್ಷಪಾತಿ. ಉತ್ತಮೌಜ-ಪಾಂಚಾಲರಾಜನಾದ ದ್ರುಪದನ ಮಗ. ವಿಲಗ-ಜಂಜಾಟ, ವೈಪರೀತ್ಯ. ತಗಹು-ಸಂಬಂಧ. ಝಡಿಕೆ-ಒತ್ತಾಯ, ಹಠ. ಝೊಮ್ಮಿನ-ಮೂರ್ಛೆಯ.

## ನಿನ್ನ ತನುಭವನ್ ಈತ

ಈ ಕಾವ್ಯಭಾಗವನ್ನು ಲಕ್ಷ್ಮೀಶ ಕವಿಯ ಜೈಮಿನಿ ಭಾರತದಿಂದ ತೆಗೆದುಕೊಂಡಿದೆ. ಜನಪ್ರಿಯ ಕವಿಯಾಗಿದ್ದ ಲಕ್ಷ್ಮೀಶನ ಕಾಲ, ಮತ ಮತ್ತು ಸ್ಥಳದ ಬಗ್ಗೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯವಿದೆ. ಕವಿಯು ಭರದ್ವಾಜ ಗೋತ್ರದವನೆಂದೂ, ಅಣ್ಣಮಾಂಕನ ಸುತನೆಂದೂ, 'ಕರ್ಣಾಟಕ ಕವಿಚೂತ ವನ ಚೈತ್ರ' ಎಂಬ ಬಿರುದುಳ್ಳವನೆಂದೂ, ದೇವಪುರದ ಲಕ್ಷ್ಮೀಶನ ಭಕ್ತನೆಂದೂ ಕಾವ್ಯದ ಪೀಠಿಕಾ ಸಂಧಿಯಿಂದ ವ್ಯಕ್ತವಾಗುತ್ತದೆ. ಲಕ್ಷ್ಮೀಶನು ಅರಸೀಕೆರೆ ತಾಲ್ಲೂಕಿನ ದೇವನೂರಿನವನೆಂದೂ, ಭಾಗವತ ಸಂಪ್ರದಾಯಕ್ಕೆ ಸೇರಿದವನೆಂದೂ, ಕಾಲ ಸುಮಾರು ಕ್ರಿ.ಶ. ೧೫೫೦ ಇದ್ದಿರಬಹುದೆಂದು ಅನೇಕ ವಿದ್ವಾಂಸರ ಅಭಿಪ್ರಾಯವಾಗಿದೆ. ಲಕ್ಷ್ಮೀಶನ ಕೃತಿ, ಸಂಸ್ಕೃತ ಜೈಮಿನಿ ಭಾರತದ ಸಂಗ್ರಹರೂಪವಾದ ಅನುವಾದವಾಗಿದೆ. ಮೂಲದ ೬೮ ಅಧ್ಯಾಯದ ವಿಸ್ತಾರವು ಲಕ್ಷ್ಮೀಶನ ಜೈಮಿನಿ ಭಾರತದಲ್ಲಿ ೩೪ ಸಂಧಿಗಳಲ್ಲಿ ಅಡಕವಾಗಿದೆ. ಈ ಕೃತಿ ಮುಖ್ಯವಾಗಿ ಕೃಷ್ಣನ ಕತೆ, ಜೈಮಿನಿ ಭಾರತವು ಒಂದು ಕತೆ ಎನ್ನುವುದಕ್ಕಿಂತ ಒಂದು ಕತಾ ಸಂಗ್ರಹವೆನ್ನಲು ಯೋಗ್ಯವಾಗಿದೆ. ಕತೆ ಹೇಳುವುದರಲ್ಲಿ, ಭಕ್ತಿಯನ್ನು ವ್ಯಕ್ತಪಡಿಸುವುದರಲ್ಲಿ, ವೀರ ರಸವರ್ಣನೆಯಲ್ಲಿ, ಪ್ರಕೃತಿ ಸೌಂದರ್ಯವನ್ನು ವ್ಯಕ್ತಪಡಿಸುವುದರಲ್ಲಿ, ಭಾವನೆಗಳಿಗೆ ರೂಪವನ್ನು ಕೊಡುವುದರಲ್ಲಿ, ಶಬ್ದಾರ್ಥಾಲಂಕಾರ ವೈಭವದಲ್ಲಿ ಲಕ್ಷ್ಮೀಶನದು ಎತ್ತಿದ ಕೈ. ಸಂಗೀತ ಸದೃಶವಾದ ಇಂಪು ಅವನ ಹುಟ್ಟು ಗುಣ.

ಧರ್ಮರಾಯನ ಯಜ್ಞಾಶ್ವ ಮಣಿಪುರಕ್ಕೆ ಬರುವುದು. ಬಭ್ರುವಾಹನ ಕುದುರೆಯ ಬೆಂಗಾವಲಿಗೆ ಬಂದಿರುವವನು ತನ್ನ ತಂದೆ ಎಂದು ತಿಳಿ

ಯದೆ 'ಕ್ಷತ್ರಿಯರ ಪಂತ'ದಿಂದ ಕುದುರೆಯನ್ನು ಕಟ್ಟಿದ. ಅನಂತರ ತನ್ನ ತಾಯಿ ಚಿತ್ರಾಂಗದೆಯಿಂದ ವಿಷಯ ತಿಳಿದು, ತನ್ನ ಸಕಲ ಸಂಪತ್ತನ್ನು ಅರ್ಜುನನ ಪಾದಕ್ಕೆ ಸಮರ್ಪಿಸಿ ಭಕ್ತಿಯಿಂದ ಸಾಷ್ಟಾಂಗ ನಮಸ್ಕಾರ ಮಾಡಿದ. ಆದರೆ ಮೊದಲು ಅಶ್ವವನ್ನು ಕಟ್ಟಿ ಅನಂತರ ಬಿಡುವ ಕ್ಷತ್ರಿಯರಿಗನುಚಿತವಾದ ಬಭ್ರುವಾಹನನ ನಡತೆಗೆ ಕಿಡಿಕಿಡಿಯಾದ ಅರ್ಜುನ ಅವನನ್ನು ತಿರಸ್ಕರಿಸಿ ಮೂದಲಿಸಿದ. ಅವಮಾನಗೊಂಡ ಬಭ್ರುವಾಹನ ಅರ್ಜುನನ ತಲೆ ತೆಗೆಯುವುದಾಗಿ ಪ್ರತಿಜ್ಞೆ ಮಾಡಿದ ತಂದೆ ಮಕ್ಕಳ ಸಂಭಾಷಣೆ ಸ್ವಾರಸ್ಯವಾಗಿದೆ. ಇದೇ ಇಲ್ಲಿಯ ಪ್ರಸ್ತುತ ಪ್ರಸಂಗ.

೧ ಹಯ–ಕುದುರೆ. ವಹಿಲ–ಬೇಗನೆ. ಪಾಳಯ–ಶಿಬಿರ, ಠಾಣ್ಯ, ದಂಡು. ಕಟ್ಟಿಸಕ–ಬಹು ಸುಂದರ. ಪೊಳಲ್–ಪಟ್ಟಣ. ಕ್ಷಿತಿಪ–ದೊರೆ. ಹಂಸಧ್ವಜ–ಚಂಪಕಾವತೀ ನಗರಿಯ ಅರಸು. ಯುಧಿಷ್ಠಿರನ ಅಶ್ವಮೇಧದ ಕುದುರೆಯನ್ನು ಅಡ್ಡಗಿಸಿ, ತನ್ನ ಮಗನಾದ ಸುಧನ್ವನನ್ನು ಅರ್ಜುನನ ಮೇಲೆ ಯುದ್ಧಕ್ಕೆ ಕಳುಹಿಸಿ, ಸುಧನ್ವ ರಾಣಿವಾಸಕ್ಕೆ ಹೋಗಿ ತಾಯಿಯಿಂದ ತತ್ಪ್ರೋಕ್ಷಣ ದೇಶವನ್ನು ಹೊಂದಿ, ರಣರಂಗಕ್ಕೆ ಹೋಗಿ ಅರ್ಜುನನಿಂದ ಸತ್ತ. ಬಳಿಕ ಹಂಸಧ್ವಜ ಪುತ್ರ ಶೋಕದಿಂದ ಮರುಗಿ ತಾನೂ ಅರ್ಜುನನ ಸಂಗಡ ಯುದ್ಧ ಮಾಡಿ ಸೋತು, ಕಡೆಗೆ ಅರ್ಜುನನ ಮರೆ ಹೊಕ್ಕು ಅವನ ಹಿಂದೆ ತಾನೂ ನೆರವಾದ.

೨–೪ ಭೂನಾಥ–ದೊರೆ. ಪಿದ್ಧಾಯ–ರಾಜಾದಾಯ. ಕನಕ–ಚಿನ್ನ. ತೆತ್ತು–ಕೊಟ್ಟು. ಭೂತಳ–ಭೂಮಿ. ಪೊರೆ–ರಕ್ಷಿಸು. ಪದುಳ–ನೆಮ್ಮದಿ, ಸೌಖ್ಯ, ಏಳಿಗೆ. ಕೊಡಕೆ–ಕಿವಿ. ಧವಳ–ಬಿಳಿಯ. ಕರಣಿಕ–ಲೆಕ್ಕಿಗ, ಬರಹಗಾರ. ಪವಣು–ಸಾಮರ್ಥ್ಯ, ಯೋಗ್ಯತೆ. ಪಡಿ–ಪ್ರತಿ.

೫ ಪರ್ಮೆ–ಹಮ್ದು. ನೀಲಧ್ವಜ–ಒಬ್ಬ ಅರಸು. ನರ್ಮದಾ ನದೀ ತೀರದಲ್ಲಿ ಮಾಹಿಷ್ಮತೀ ನಗರಿಯನ್ನು ಆಳುತ್ತಿದ್ದ. ಪಾಂಡವರ ಅಶ್ವಮೇಧದ

ಕುದುರೆ ಮಾಹಿಷ್ಮತಿಯ ಬಳಿಯಲ್ಲಿ ನಡೆತಂದಾಗ ನೀಲಧ್ವಜನ ಮಗನಾದ ಪ್ರವೀರ ತನ್ನ ಮಡದಿಯಾದ ಮದನಮಂಜರಿಯೊಂದಿಗೆ ವನವಿಹಾರ ಮಾಡುತ್ತಿದ್ದು ಯಜ್ಞಾಶ್ವವನ್ನು ಕಂಡು ಕಟ್ಟಿದ. ಕರ್ಣ ಪುತ್ರನಾದ ವೃಷ ಕೇತು ಯುದ್ಧ ಮಾಡಿ ಸೋತುಹೋದ. ಬಳಿಕ ಅನುಸಾಲ್ವ ಯುದ್ಧಕ್ಕೆ ನಿಂತ. ಆಗ ನೀಲಧ್ವಜ ಈ ಸಮಾಚಾರವನ್ನ ಕೇಳಿ ತಾನೇ ಬಂದು ಅರ್ಜುನ ನೊಂದಿಗೆ ಯುದ್ಧ ಮಾಡಿ, ಅಗ್ನಿಯ ಒತ್ತಾಸೆಯಿಂದ ಅರ್ಜುನನನ್ನು ಹಿಮ್ಮೆಟ್ಟಿಸಿದ. ಆಗ ಅರ್ಜುನ ಅಗ್ನಿಯನ್ನು ಪ್ರಾರ್ಥಿಸಿ ಒಲಿಸಿಕೊಂಡು, ನಾರಾಯಣಾಸ್ತ್ರದಿಂದ ನೀಲಧ್ವಜನ ಕೆಚ್ಚನ್ನು ಮುರಿದ. ಬಳಿಕ ಅಗ್ನಿ ಅರ್ಜುನನಿಗೂ ನೀಲಧ್ವಜನಿಗೂ ಸ್ನೇಹವನ್ನುಂಟುಮಾಡಿಸಲಾಗಿ ನೀಲಧ್ವಜ ಅರ್ಜುನನನ್ನು ಅನೇಕ ವಿಧವಾದ ಕಪ್ಪಕಾಣಿಕೆಗಳಿಂದ ಮನ್ನಿಸಿ, ಪಾಂಡವರ ಅಶ್ವಮೇಧಕ್ಕೆ ನೆರವಾದ. ಈ ಕತೆ ಕನ್ನಡ ಜೈಮಿನಿ ಭಾರತದಲ್ಲಿ ಸ್ವಲ್ಪ ವ್ಯತ್ಯಾಸವಾಗಿ ಬಂದಿದೆ.

೬–೧೦ ಮಸಕ–ಉತ್ಸಾಹ. ಪೊರವಳಯ–ಹೊರಭಾಗ. ಸುಮ್ಮಾನ–ತೃಪ್ತಿ, ಮೌನ. ಮಿಡುಕು–ಶೌರ್ಯ, ಸಾಹಸ. ತಳರ್–ಹೊರಡು, ಚಲಿಸು. ಮಥಿಸು–ಕಡೆ.

೧೧–೧೫ ಪಂತ–ಜಿದ್ದು, ಸ್ಪರ್ಧೆ. ಸೂನು–ಮಗ. ಲಾಜ–ಅರಳು. ದಧಿ–ಮೊಸರು. ದೂರ್ವ–ಕರಿಕೆಯ ಹುಲ್ಲು.

೧೬–೧೮ ಶಕಟ–ಗಾಡಿ, ಬಂಡಿ. ನಿಕರ–ಸಮೂಹ. ಕುಂಜರ–ಆನೆ. ರಜತ–ಬೆಳ್ಳಿ. ಕಾಂಚನ–ಚಿನ್ನ. ಅಂಬರ–ಬಟ್ಟೆ. ಖಟ್ವೆ–ಉಯ್ಯಾಲೆ, ಮಂಚ ತಲ್ಪ–ಹಾಸಿಗೆ. ವ್ಯಜನ–ಬೀಸಣಿಗೆ. ಸಿತಾತಪತ್ರ–ಬೆಳ್ಗೊಡೆ. ಸವ್ಯಸಾಚಿ–ಅರ್ಜುನ. ಆದಿತ್ಯ–ಸೂರ್ಯ. ಕಿರೀಟಿ–ಅರ್ಜುನ. ಮಧುಸೂದನ–ಕೃಷ್ಣ. ವೃಷಕೇತು–ಕರ್ಣನ ಮಗ. ಕರ್ಣನು ಮಡಿದ ತರುವಾಯ ಇವನು ಪಾಂಡವರನ್ನು ಸೇರಿದ.

೧೯ ಅನುಸಾಲ್ವ-ಸೌಭದೇಶದ ಅರಸನಾದ ಸಾಲ್ವರಾಜನ ತಮ್ಮ. ಸಾಲ್ವನನ್ನು ಶ್ರೀಕೃಷ್ಣ ಕೊಂದನೆಂಬ ಕೋಪದಿಂದ ಪಾಂಡವರ ಅಶ್ವಮೇಧದ ಕುದುರೆಯನ್ನು ತಡೆದು, ಕರ್ಣನ ಮಗನಾದ ವೃಷಕೇತುವಿನಿಂದ ಪರಾಜಿತನಾಗಿ, ಕೃಷ್ಣನನ್ನು ಮರೆಹೊಕ್ಕು ಅಶ್ವಮೇಧಕ್ಕೆ ನೆರವಾದ.

ಯೌವನಾಶ್ವ-ಭದ್ರಾವತೀ ನಗರದ ಅರಸು. ಪಾಂಡವರು ಅಶ್ವಮೇಧದ ಕುದುರೆಯನ್ನು ಇವನಿಂದ ತಂದರು.

ದನುಜಾರಿನಂದನ-ಪ್ರದ್ಯುಮ್ನ. ಪೊರಮಡು-ಹೊರಟು. ಸನ್ನಾಹ-ಸಿದ್ಧತೆ.

೨೦-೨೨ ಭಾಸುರ-ಪ್ರಕಾಶಮಾನವಾದ. ಭೂಸುರ-ವಿಪ್ರ. ಪದವು-ಸಡಗರ. ಝಲ್ಲವಿಸು-ಸಂಭ್ರಮ, ಉಬ್ಬು. ಮೌಳಿ-ಕಿರೀಟ. ಮಸ್ತಕ-ತಲೆ.

೨೩ ಸಂಪ್ರೀತಿಯಿಂದಿವರಾದರರಸಿಯರ್........ಜಾತನಾದೆಂ-

ಧರ್ಮರಾಯ ದ್ರೌಪದಿಯರನ್ನ ಏಕಾಂತದಲ್ಲಿ ಕಂಡ ಪಾಪದ ಪ್ರಾಯಶ್ಚಿತ್ತಕ್ಕಾಗಿ ಅರ್ಜುನ ತೀರ್ಥಯಾತ್ರೆ ಕೈಗೊಂಡನು. ಆಗ ಗಂಗಾದ್ವಾರದಲ್ಲಿದ್ದಾಗ ಕೌರವ್ಯನೆಂಬ ನಾಗರಾಜನ ಮಗಳು ಉಲೂಪಿಯೆಂಬ ನಾಗಕನ್ಯೆಯನ್ನೂ, ಮಣಲೂರಿನಲ್ಲಿದ್ದಾಗ ಗಂಧರ್ವರಾಜನಾದ ಮಲಯಧ್ವಜನ ಮಗಳು ಚಿತ್ರಾಂಗದೆಯನ್ನೂ ಮದುವೆಯಾಗಿ,ಅವರಿಬ್ಬರನ್ನೂ ಅಲ್ಲಿಯೇ ಬಿಟ್ಟು ಹೊರಟು ಹೋದನು. ಮುಂದೆ ಅವರಿಬ್ಬರಿಗೂ ಕ್ರಮವಾಗಿ ಇರಾತ, ಬಭ್ರುವಾಹನ ಎಂಬ ಮಕ್ಕಳಾದರು.

೨೪-೩೧ ಖದ್ಯೋತ-ಸೂರ್ಯ. ಸನ್ನಿಭ-ಸಮಾನ. ನಿರವದ್ಯ-ದೋಷವಿಲ್ಲದ. ಪಂದೆ-ಹೇಡಿ. ಡೊಂಬು-ಜಂಬ, ಹೆಮ್ಮೆ. ದುಹಿತೃ-ಮಗಳು. ಸೀವರಿಸು-ಅಸಹ್ಯಪಡು, ತಿರಸ್ಕರಿಸು. ಅಧ್ವರ-ಯಜ್ಞ. ಬೇಳಂಬ-ನಿಮಿತ್ತ,

ಕಾರಣ. ಸುರಪಂಗೆ ಪಾರ್ಥನೊಳಾದ ಕೋಳಾಹಳದ ಕದನದಂತೆ-

ಒಮ್ಮೆ ವರುಣ ಲೋಕದಲ್ಲಿ ಹನ್ನೆರಡು ವರ್ಷಗಳವರೆಗೆ ಒಂದು ಯಜ್ಞ ನಡೆದುದರಿಂದ ಅಗ್ನಿದೇವನ ಜೀರ್ಣಶಕ್ತಿಯು ಕುಗ್ಗಿತು. ದೇವ ವೈದ್ಯರಾದ ಅಶ್ವಿನಿ ದೇವತೆಗಳು ಇಂದ್ರನ ಖಾಂಡವವನದಲ್ಲಿ ಅಜೀರ್ಣವನ್ನು ಹೋಗಲಾಡಿಸುವ ಉತ್ತಮವಾದ ಮೂಲಿಕೆಗಳಿರುವುವೆಂತಲೂ, ಅವುಗಳನ್ನು ಸೇವಿಸಿದರೆ ಅಗ್ನಿಮಾಂದ್ಯ ಮಾಯವಾಗುವುದೆಂತಲೂ ತಿಳಿಸಿದರು. ಅಗ್ನಿದೇವ ಕೃಷ್ಣಾರ್ಜುನರಲ್ಲಿಗೆ ಬ್ರಾಹ್ಮಣ ವೇಷದಿಂದ ಹೋಗಿ, ಅವರಿಂದ ಅಭಯವನ್ನು ಪಡೆದು ಆ ವನವನ್ನು ಸುಡತೊಡಗಿದ. ಇಂದ್ರ ಯುದ್ಧಕ್ಕೆ ಬಂದ. ಅರ್ಜುನ ಇಂದ್ರನನ್ನು ಸೋಲಿಸಿಬಿಟ್ಟ. ಅಗ್ನಿಯನ್ನು ಶಾಂತಗೊಳಿಸುವುದಕ್ಕೆ ಇಂದ್ರ ಮಳೆ ಸುರಿಸಿದನು. ಅರ್ಜುನ ಶರಪಂಜರದಿಂದ ಆ ಮಳೆ ಅಗ್ನಿಯ ಮೇಲೆ ಬೀಳದಂತೆ ಮಾಡಿದ.

## ಬಾಣಮುಂ ಬಂಜೆಗೈದಪರೆ

ಈ ಕಾವ್ಯಭಾಗವನ್ನೂ ಲಕ್ಷ್ಮೀಶ ಕವಿಯ ಜೈಮಿನಿ ಭಾರತದಿಂದ ತೆಗೆದುಕೊಂಡಿದೆ. ಜೈಮಿನಿ ಭಾರತವು ಅತ್ಯಂತ ಜನಪ್ರಿಯವಾದ ಕಾವ್ಯ ಅದರಲ್ಲಿ ಧರ್ಮರಾಯನು ಅಶ್ವಮೇಧ ಯಜ್ಞವನ್ನು ಮಾಡಿದ, ಅಂದರೆ ಮಹಾಭಾರತದೊಳಗಿನ ಅಶ್ವಮೇಧಿಕ ಪರ್ವದ ಕಥಾಭಾಗವು ಬರುತ್ತದೆ. ಲಕ್ಷ್ಮೀಶನು ಉಪಮಾಲೋಲನೆಂದೂ, ನಾದಲೋಲನೆಂದೂ ಪ್ರಸಿದ್ಧನಾಗಿದ್ದಾನೆ.

ಧರ್ಮರಾಯನ ಯಜ್ಞ ಕುದುರೆ ಅರ್ಜುನನ ಬೆಂಗಾವಲಿನಲ್ಲಿ ಹೊರಟಿತು. ನೀಲಧ್ವಜ, ಹಂಸಧ್ವಜ ಮುಂತಾದವರು ಕುದುರೆಯನ್ನು ಕಟ್ಟಿ ಯುದ್ಧಮಾಡಿ ಸೋತು ಕಪ್ಪಕಾಣಿಕೆಯನ್ನು ಒಪ್ಪಿಸಿದರು. ಕುದುರೆ ಮಣಿಪುರಕ್ಕೆ ಬರಲು ಬಭ್ರುವಾಹನ ಕಟ್ಟಿದ. ಅರ್ಜುನ ತನ್ನ ತಂದೆಯೆಂದು ಅನಂತರ ತಾಯಿ ಚಿತ್ರಾಂಗದೆಯಿಂದ ತಿಳಿಯಿತು. ಅರ್ಜುನನಿಗೆ ಸಾಷ್ಟಾಂಗ

ನಮಸ್ಕಾರ ಮಾಡಿ ದುಡುಕನ್ನು ಮನ್ನಿಸುವಂತೆ ಬಭ್ರುವಾಹನ ಬೇಡಿದ. ಅರ್ಜುನ ತಿರಸ್ಕರಿಸಿ ಅವಮಾನಗೊಳಿಸಿದ. ತಂದೆ ಮಕ್ಕಳ ಮಧ್ಯೆ ಯುದ್ಧ ಅನಿವಾರ್ಯವಾಯಿತು. ಹಿಂದೆಯೂ ಇಂಥ ಪ್ರಸಂಗ ನಡೆದಿರುವುದನ್ನ ಕವಿ. ಹೇಳುವುದರ ಮೂಲಕ ಜೈಮಿನಿ ಭಾರತದಲ್ಲಿ ರಾಮಾಯಣವನ್ನ ಸಂಕ್ಷಿಪ್ತ ವಾಗಿ ತಿಳಿಸುತ್ತಾನೆ. ರಾಮನ ಯಜ್ಞ ಕುದುರೆ ವಾಲ್ಮೀಕಿಯ ಆಶ್ರಮಕ್ಕೆ ಬಂದಾಗ ಲವ ಹಿಡಿದು ಕಟ್ಟಿದ. ಲವಕುಶರೊಂದಿಗೆ ಶತ್ರುಘ್ನ, ಭರತ, ಲಕ್ಷ್ಮಣ ಹೋರಾಡಿ ಸೋತರು. ಬಾಲಕರ ಶೌರ್ಯಕ್ಕೆ ಬೆರಗಾಗಿ ರಾಮನೇ ಬಂದನು. ಲವಕುಶರು ತನ್ನ ಮಕ್ಕಳೆಂದು ತಿಳಿಯಿತು. ಆದರೂ ಯುದ್ಧ ವನ್ನು ಮಾಡಲೇ ಬೇಕಾಗಿ ಬಂದಿತು. ರಾಮ ಹೋರಾಡಿ ಸೋತ. ಈ ಪ್ರಸಂಗವನ್ನ ಕವಿ ಸ್ವಾರಸ್ಯವಾಗಿ ಚಿತ್ರಿಸಿದ್ದಾನೆ.

೧-೫ ಯಮಳರು-ಅವಳಿ ಮಕ್ಕಳು. ಬೆಸಗೊಳ್-ಕೇಳು. ವಿಶಿಖ-ಬಾಣ. ನಿಶಿತ-ಹರಿತ.

ಜನಮೇಜಯ-ಅರ್ಜುನನ ಮರಿಮಗ. ಪರೀಕ್ಷಿತ್ ರಾಜನ ಮಗ. ತಂದೆ ಸರ್ಪದುಷ್ಟನಾದುದನ್ನ ಕೇಳಿ ಜನಮೇಜಯನು ಲೋಕದಲ್ಲಿ ಸರ್ಪ ಕುಲವೇ ಇಲ್ಲವಂತೆ ಮಾಡಲು ಸಂಕಲ್ಪಿಸಿ ಸರ್ಪಯಾಗ ಮಾಡಿದನು. ಅದರ ಪಾಪ ನಿವಾರಣೆಗಾಗಿ ವೈಶಂಪಾಯನರಿಂದ ಮಹಾಭಾರತ ಕಥೆಯನ್ನು ಕೇಳಿ ದನು.

೬-೧೦ ನಿಗಮ-ವೇದ. ಕಾರ್ಮುಕವಿದ್ಯೆ-ಬಿಲ್ಲುವಿದ್ಯೆ. ಮಗುಳ್-ಮತ್ತೆ. ವಿಪಿನಚಾರಿ-ಕಾಡಿನಲ್ಲಿ ತಿರುಗುವ, ವನೇಚರ. ತಪನಕುಲ-ಸೂರ್ಯವಂಶ. ನಿಗ್ರಹಿಸು-ಬಂಧಿಸು. ಅಭ್ಯಗ್ರ-ಜಾಗ್ರತೆ, ಸಮೀಪಕ್ಕೆ ಬರುವ. ಸಿಂಗಳಿಕ-ಕಪ್ಪುಕೋತಿ, ಮುಸುವ. ಅರ್ಭಕ-ಮಗು. ತರಹರಿಸು-ಸಹಿಸು.

೧೧-೧೪ ಬಚ್ಚಿ-ವ್ಯರ್ಥ. ಕೆರಳು-ಕೋಪಿಸು. ಕಣೆ-ಬಾಣ.

ಕಾಕುತ್ಸ್ಥ, ರಾಘವ–ಕಕುತ್ಸ್ಥ ಮತ್ತು ರಘು ಎಂಬುವರು ಇಕ್ಷ್ವಾಕು ವಂಶದ ಪ್ರಸಿದ್ಧ ವ್ಯಕ್ತಿಗಳು. ಆ ವಂಶದಲ್ಲಿ ಜನಿಸಿದ ರಾಮನನ್ನು ಕಾಕುತ್ಸ್ಥ. ರಾಘವ, ರಘೂದ್ವಹ ಮುಂತಾಗಿ ಕರೆಯುವುದುಂಟು.

ಅಂಬು–ಬಾಣ. ವರೂಥ–ರಥ. ಅಂಬರ–ಆಕಾಶ. ಎಳೆತಟ–ಎಳೆ ದಾಟ. ಅವನಿಜೆ–ಸೀತೆ.

ವಾಲ್ಮೀಕಿ–ಒಬ್ಬ ಬ್ರಹ್ಮರ್ಷಿ, ಪ್ರಚೇತಸನ ಮಗ. ಲಕ್ಷ್ಮಣ ರಾಮನ ಅಪ್ಪಣೆಯಂತೆ ಸೀತೆಯನ್ನು ಅರಣ್ಯದಲ್ಲಿ ಬಿಟ್ಟು ಹೋದ. ಬಳಿಕ ವಾಲ್ಮೀಕಿ ಆಕೆಯನ್ನು ತನ್ನ ಆಶ್ರಮಕ್ಕೆ ಕರೆದೊಯ್ದು ಋಷಿಪತ್ನಿಯರ ಮೂಲಕ ಆಕೆಯನ್ನು ಆದರಿಸಿದನು. ವಾಲ್ಮೀಕಿ ರಾಮಾಯಣವನ್ನು ರಚಿಸಿದ. ಲವ ಕುಶರಿಗೆ ರಾಮಾಯಣವನ್ನು ಕಂಠಪಾಠ ಮಾಡಿಸಿ ರಾಮನ ಮುಂದೆ ಹಾಡಿಸಿದ.

೧೫–೨೦ ವೈದೇಹಿ–ಸೀತೆ. ಭೂತಹಿಂಸೆ–ಪ್ರಾಣಿಹಿಂಸೆ. ನಿಶಾಟ–ರಾಕ್ಷಸ. ಸ್ವೈವೆರಗು–ಬೆಬ್ಬೆರಗು. ವಾರಣ–ಆನೆ. ಓಜೆ–ಕ್ರಮ. ಮಖ–ಯಜ್ಞ. ಯಾಜನಿ–ಯಜ್ಞ ಮಾಡಿಸುವುದು. ವ್ಯಾಜ–ವ್ಯವಹಾರ, ಸಂಗತಿ.

೨೨–೨೮ ವಲ್ಲಕಿ–ವೀಣೆ. ತುಂಬುರು–ಗಂಧರ್ವ ಗಾಯಕರಲ್ಲಿ ಪ್ರಸಿದ್ಧ ನಾದವನು. ಆಘ್ರಾಣಿಸು–ಮೂಸಿನೋಡು. ವನಧಿ–ಸಮುದ್ರ. ಕೊನರು–ಚಿಗುರು.



## ಒಪ್ಪೋಲೆ

| ತಪ್ಪು | ಒಪ್ಪು | ಪುಟ | ಪಂಕ್ತಿ |
|---|---|---|---|
| ೦೪ | ೧೪ | ೧೭ | ೧೮ |
| ಇನ್ನಾರು | ಇನ್ನಾರ | ೨೩ | ೧೯ |
| ಬಲೆ | ಬಲ್ಲೆ | ೨೪ | ೧ |
| ಘನ | ಘನ | ೩೨ | ೧೧ |
| ನಸುತ | ಸುತನ | ೩೯ | ೨೪ |
| ಯುದಿಷ್ಠಿರ | ಯುಧಿಷ್ಠಿರ | ೪೭ | ೭ |
| ಯುದಿಷ್ಠಿರ | ಯುಧಿಷ್ಠಿರ | ೫೧ | ೧೮ |
| ಅಂಗೈಲಸಮ್ಮದೆ | ಅಂಗೈಸಲಮ್ಮದೆ | ೫೪ | ೪ |
| ಪ್ರದ್ಯಮ್ನ | ಪ್ರದ್ಯುಮ್ನ | ೬೩ | ೭ |
| ೯-೧೦ | ೬-೧೦ | ೭೭ | ೧೪ |
| ಯುದಿಷ್ಠಿರ | ಯುಧಿಷ್ಠಿರ | ೮೧ | ೧ |
| ಯುದಿಷ್ಠಿರ | ಯುಧಿಷ್ಠಿರ | ೮೧ | ೩ |
| ೫೬-೯೩ | ೫೬-೬೩ | ೮೧ | ೬ |



